ಪ್ರಕಾಶಕರು:-

**ಕೃ. ಹ. ಕುಲಕರ್ಣಿ**

ಮಂಗಳವಾರ ಪೇಟಿ, ಧಾರವಾಡ.

**ಬೆಲೆ ಎಂಟಾಣೆ**

ಮಾರಾಟದ ಅಧಿಕಾರಿಗಳು:—

ಮನೋಹರ ಗ್ರಂಥ ಭಾಂಡಾರ, ಧಾರವಾಡ.

ಮುದ್ರಕರು:—

ಅಣ್ಣಾಚಾರ್ಯ ಬಾಳಾಚಾರ್ಯ ಹೊಸಕೇರಿ

ವಿಜಯ ಮುದ್ರಾಲಯ, ಧಾರವಾಡ.

# ಮುನ್ನುಡಿ

ನನ್ನ ವಿಷಯದಲ್ಲಿ ಶ್ರೀಮಾನ್ ಕುಲಕರ್ಣಿಯವರಿಗೆ ಅದೇನು ಅಭಿಮಾನವೋ! ಈ ಸಂಗ್ರಹಕ್ಕೆ ನನ್ನದೇ ಮುನ್ನುಡಿಯಿರಬೇಕೆಂದರು. ಅವರ ವಿಶ್ವಾಸವನ್ನು ಕಂಡು ನಾನೂ ಈ ಚಿಕ್ಕ ಮುನ್ನುಡಿಯನ್ನು ಬರೆಯಲು ಒಪ್ಪಿಕೊಂಡೆ.

ವಿಮರ್ಶಕ, ಮುನ್ನುಡಿಕಾರರ ಕಾರ್ಯವು ಒಂದೇ ಬಗೆಯದಾದರೂ ಅವರಿಬ್ಬರ ನೋಟಗಳು ಬೇರೆ ಬೇರೆ ರೀತಿಯವಾಗಿರುತ್ತವೆ. ವಿಮರ್ಶಕನ ನೋಟವು ಗ್ರಂಥದಲ್ಲಿಯ ಗುಣದೋಷಗಳೆರಡನ್ನೂ-ನಿಷ್ಪಕ್ಷಪಾತದಿಂದ—ಕಂಡುಹಿಡಿದು ತೂಗಿ ನೋಡುತ್ತದೆ; ಆದರೆ ಮುನ್ನುಡಿಕಾರನ ನೋಟವು ಸಹಾನುಭೂತಿಯಿಂದ ಕೃತಿಯಲ್ಲಿಯ ಗುಣಗಳನ್ನು ಮಾತ್ರ ಆಯ್ದು, ಜನರ ಕಣ್ಣೆದುರಿಗೆ ಇರಿಸಬೇಕಾಗುತ್ತದೆ.

ಅದೇನೋ, ಈಗ ನಮ್ಮ ನಾಡಿನಲ್ಲಿ ಸಣ್ಣ ಕತೆಗಳ ಸಾಹಿತ್ಯಕ್ಕೊಂದು ಸುಗ್ಗಿ ಬಂದಂತಾಗಿದೆ. ಅದಕ್ಕಾಗಿಯೇ ಮೀಸಲಾಗಿದ್ದ ನಾಲ್ಕೈದು ಪತ್ರಿಕೆಗಳಲ್ಲದೆ ಬೇರೆ ಬೇರೆ ಕತೆಗಾರರ ಸ್ವತಂತ್ರ ಸಂಗ್ರಹಗಳೂ ಸಾಕಷ್ಟು ಹೊರಕ್ಕೆ ಬರುತ್ತಲಿವೆ.

ಶ್ರೀ. ಕುಲಕರ್ಣಿಯವರೂ ತಮ್ಮದೊಂದು ಸಂಗ್ರಹದ ಎಡೆಯನ್ನು ಕನ್ನಡಿಗರೆದುರು ಬಡಿಸಿ, ರಸವಿದ್ದುದದನ್ನವರು ಆಸ್ವಾದಿಸಲೆಂಬ ಹಾರಯಿಕೆಯುಳ್ಳವರಾಗಿದ್ದಾರೆ.

ಕತೆಗಳು ಸರ್ವಜನ ಪ್ರಿಯವಾಗಬೇಕಾದರೆ ಅದರಲ್ಲಿ (೧) ಆತುರವನ್ನು ಹುಟ್ಟಿಸುತ್ತ ಹೋಗುವಂತಹ ಸಂವಿಧಾನಕ ಚಮತ್ಕೃತಿ, ಹೃದಯಸ್ಪರ್ಶಿಯಾದ ಭಾವನೆಗಳ ಚಿತ್ರ, (೩) ತಲೆದೂಗಿಸುವ ಕಥನಕೌಶಲ ಈ ಮೂರು ಗುಣಗಳ ಸಮ್ಮೇಲನವು ಅವಶ್ಯವಾಗಿ ಬೇಕು. ಈ ಮೂರರಲ್ಲಿ ಒಂದೊಂದು ಗುಣಗಳ ಪರಿಪೂರ್ಣತೆಯಿದ್ದರೂ ಅಂತಹ ಕತೆಗಳು ಒಂದೊಂದು ಬಗೆಯ ಜನರಿಗೆ ಮೆಚ್ಚಿಕೆಯೆನಿಸುವುವು. ಶ್ರೀ. ಕುಲಕರ್ಣಿಯವರ ಕೃತಿಗಳಲ್ಲಿ ಈ ಮೂರೂ ಗುಣಗಳ ಪೂರ್ಣ ಬೆಳವಣಿಗೆಯನ್ನು ನಾವು ಹೆಚ್ಚಾಗಿ ಕಾಣ

ಲಾರಿವಾದರೂ ಅವುಗಳ ಮೊಳಕೆ ಚಿಗುರೊಡೆದು ಕುಡಿಬಿಟ್ಟುಕೊಂಡು ಅವರ ಭವಿಷತ್ಕಾರ್ಯದ ಕಡೆಗೆ ನಮ್ಮ ಆಶೆಯ ನೋಟಗಳನ್ನು ಸೆಳೆಯುತ್ತಿರುವದು

ಈ ಸಂಗ್ರಹದಲ್ಲಿದ್ದುವೆಲ್ಲವೂ ಸಣ್ಣಕತೆಯ ಒರೆಗೆ ಹತ್ತಲಾರವು. 'ನಮ್ಮ ಸಾಲೆಯ ದಿನಗಳು' 'ಪೂಜೆ' 'ಟೇಪೂ' 'ಕಾಣಿಕೆ' 'ಕೊಡೆಯ ಸಮಸ್ಯೆ' ಇನ್ನೈದೂ ಸ್ವವೃತ್ತಪ್ರಧಾನವಾದುದರಿಂದ-ಹರಟೆಗಳ ಜಾತಿಯಲ್ಲಿ ಸೇರಿಸಿಕೊಳ್ಳುವಂತಹವಾಗಿವೆ. ಇನ್ನುಳಿದ ನಾಲ್ಕರಲ್ಲಿ ಮೂರು ಸ್ವತಂತ್ರವಾಗಿ ಬರೆದ ಸಣ್ಣ ಕತೆಗಳು. ಕೊನೆಯ 'ವೀಣಾನಾದ'ವು ಇಟಾಲಿ ಕತೆಯೊಂದರ ಅನುವಾದ.

ಇದರಲ್ಲಿಯ 'ಪೂಜೆ' 'ಕಾಣಿಕೆ' ಇವುಗಳಲ್ಲಿಯ ವಾಸ್ತವ ಚಿತ್ರವು ಓದುವವರನ್ನು ನಗಿಸದೆ ಬಿಡದು ಮೇರಿ-ಜಾನ ಕತೆಯು ತನ್ನ ಉದ್ದೇಶ ಸಾಧನೆಯ ಕಾರ್ಯವನ್ನು ಚನ್ನಾಗಿ ಮಾಡಬಲ್ಲದು. 'ವ್ಯಾಪಾರ' ಕತೆಯ ವಸ್ತುವು ನಮ್ಮದಲ್ಲವೆನಿಸಿದರೂ ಓದುವವರಲ್ಲಿ ಕೊನೆಯ ತನಕ ಆತುರವನ್ನು ಹಿಡಿದಿಡುತ್ತದೆ. 'ಕೊಡೆಯ ಸಮಸ್ಯೆ' ಯಲ್ಲಿಯ ವಸ್ತುವಿನ ಬೆಳೆವಣಿಗೆಯಲ್ಲಿ ಔಚಿತ್ಯವಿದೆ. 'ನಾನಿ' ಯಲ್ಲಿಯ ಸರಸಕ್ಕ ಒಂದೆರಡು ಸಲ ನಮ್ಮ ಎದೆಯ ತಂತಿಯನ್ನು ಮಿಡಿದು ಹೋಗುತ್ತಾಳೆ. 'ವೀಣಾನಾದ'ವು ಅನುವಾದವಾದರೂ ಅದರ ಭಾಷೆಯ ಮೇಲೆ ಇಂಗ್ಲಿಷಿನ ನೆರಳೇನೂ ಹೆಚ್ಚಿಗೆ ಬಿದ್ದಂತಿಲ್ಲ.

ಭಾಷೆಯ ರೀತಿ ಸರಳ-ಸುಲಭವಾಗಿದೆ. ಅಲ್ಲಲ್ಲಿ ಉತ್ತರದ ಕಡೆಯ ಕನ್ನಡದ ಮಾತಿನ ವಿಶಿಷ್ಟ ಪದ್ಧತಿಯೂ ತಲೆದೋರುತ್ತಲಿದೆ ಮಾತುಗಾರಿಕೆಯು ಹೇಳಬೇಕಾಗಿದ್ದುದನ್ನು ಉಚಿತವಾಗಿ ಸ್ಪಷ್ಟವಾಗಿ ಹೇಳುತ್ತಿದೆ.

ಬರೆದುದೆಲ್ಲವೂ ಎಲ್ಲರನ್ನೂ ಮೆಚ್ಚಿಸಲಾರದೆಂಬ ಮಾತನ್ನು ಶ್ರೀ. ಕುಲಕರ್ಣಿಯವರೂ ಅರಿತಿರುವರು. ತನ್ನ ಒಂದೊಂದು ಕೃತಿ ಒಂದೊಂದು ವ್ಯಕ್ತಿಯ ಅಂತಃಕರಣವನ್ನು ಸೆಳೆದರೆ ಸಾಕು ಅಷ್ಟಕ್ಕೆ ಲೇಖನ ಕಾರ್ಯವು ಸಾರ್ಥಕತೆಯನ್ನು ಪಡೆಯುವದು

ಸಾಧನಕೆರೆ ಧಾರವಾಡ
ತಾ॥ ೨೩-೧೨-೩೮.

**ಬೆಟಗೇರಿ ಕೃಷ್ಣಶರ್ಮ.**

# ಅರಿಕೆ.

ಇಲ್ಲಿ ಪ್ರಕಟವಾದವುಗಳಲ್ಲಿ "ಪೂಜೆ" "ಟೇಪು" ಕತೆಗಾರದಲ್ಲಿಯೂ, "ಮೇರಿ-ಜಾನ" ಧನಂಜಯದಲ್ಲಿಯೂ, "ಕಾಣಿಕೆ" "ವ್ಯಾಪಾರ" ಸದ್ಬೋಧಚಂದ್ರಿಕೆಯಲ್ಲಿಯೂ ಮುದ್ರಿತವಾಗಿವೆ. ಕಡೆಯದಾದ "ವೀಣಾ-ನಾದ"ವು ಇಟಲಿಯ ಕತೆಗಾರನೊಬ್ಬನ ಕತೆಯ ರೂಪಾಂತರ.

ಕನ್ನಡದ ಪ್ರಸಿದ್ಧ ಕತೆಗಾರರಾದ ಶ್ರೀ ಕವಿಭೂಷಣ ಕೃ. ಶ್ರೀ. ಬೆಟಗೇರಿ (ಆನಂದಕಂದ) ಯವರು ಮುನ್ನುಡಿ ಬರೆದುಕೊಟ್ಟುದುದಕ್ಕಾಗಿ ಅವರಿಗೆ ನನ್ನ ವಂದನೆಗಳು. ಅದರಂತೆಯೇ ಕತೆಗಳನ್ನು ತಿದ್ದಲು ನೆರವಾದ ನನ್ನ ಗೆಳೆಯರಿಗೂ ಸ್ವಲ್ಪೇದಿನಗಳಲ್ಲಿ ಮೆಚ್ಚುವಂತೆ ಅಚ್ಚುಹಾಕಿಕೊಟ್ಟದ್ದಕ್ಕಾಗಿ ವಿಜಯ ಮುದ್ರಾಲಯದ ಒಡೆಯರಿಗೂ ನನ್ನ ಅಭಿವಂದನೆಗಳು.

ಧಾರವಾಡ
೨೩ ೬-೧೯೩೪ } **ಕೃ. ಹ. ಕುಲಕರ್ಣಿ**

# ಪರಿವಿಡಿ

# ನಮ್ಮ ಶಾಲೆಯ ದಿನಗಳು.

ಹಿರಿಯೂರ ಹೆಸರು ಎಲ್ಲರಿಗೂ ಗೊತ್ತಿರದಿದ್ದರೂ ನಮಗೆ ಮಾತ್ರ ಪೂರಾ ಗೊತ್ತಿದೆ. ಹೆಸರಷ್ಟೇ ಏಕೆ? ಅದೇ ಊರಲ್ಲಿ ಕಲಿಯುವಾಗ ಶಾಲೆಯ ನಕಾಶದಲ್ಲಿ ಕಾಗದ ಸುರುಳಿಯನ್ನು ಬೆರಳಿಗೆ ತೊಡಗಿಸಿಕೊಂಡು ಎಷ್ಟೋ ಸಲ ಅದನ್ನು ಸಾಹೇಬರಿಗೆ ತೋರಿಸಿದ್ದೇನೆ. ನೀವು ಕೂಡ ...... ಜಿಲ್ಲೆಯ ನಕಾಶದಲ್ಲಿ ನಮ್ಮ ತಾಲೂಕಿನ ಮೇರೆಗುಂಟ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೆ ನಿಮಗಾದರೂ ಅದು ಸಿಗಬಹುದು. ನಕಾಶದಲ್ಲಿ ಬರೆದಿದ್ದಾರೆಂದಮೇಲೆ ಅದು ಊರೆಂಬುದಂತೂ ನಿಮಗೆ ನಿಶ್ಚಿತವಾಯಿತು. ಸಣ್ಣಕ್ಕರದಲ್ಲಿ ಬರೆದಿದ್ದಾರೆಂದಮೇಲೆ ಅದೊಂದು ಹಳ್ಳಿಯೆಂದೂ ನಿಮಗೆ ಹೊಳೆದಿರಬಹುದು.

ಇನ್ನು ಮುಂದೆ ಆ ಊರಿನ ವಿಷಯವಾಗಿ ನಾನು ಹೇಳುವ ಸಂಗತಿ ನಕಾಶದಲ್ಲಿ ಇಲ್ಲದ್ದು. ಹಿರಿಯೂರೆಂದ ಕೂಡಲೆ ಮೊದಲು ನಿಮಗೆ ಅದೊಂದು ದೊಡ್ಡ ಊರೆಂಬ ಕಲ್ಪನೆಯಾಗಿರಬಹುದು; ನಿಜವಾಗಿ ಅದೇನೂ ದೊಡ್ಡ ಊರಲ್ಲ. ಹಿಂದಕ್ಕೇನೋ ಅದು ದೊಡ್ಡ ಊರಾಗಿರಬೇಕೆಂದೂ, ಹಿರಿಯಣ್ಣನೆಂಬ ಹೆಸರಾದ ಗೌಡನಿದ್ದದರಿಂದ ಅದಕ್ಕೆ 'ಹಿರಿಯೂರು' ಎಂಬ ಹೆಸರು ಬಂತೆಂದೂ ಮೊನ್ನೆ ಮೊನ್ನೆ ನನಗೊಬ್ಬ ಕಲ್ಪ[illegible]ಹದ ಪಂಡಿತರು ಹೇಳಿದರು. ಅದಿರಲಿ; ಈಗಂತೂ ಅಲ್ಲಿ ಒಂದು 'ಹುಡೆ' ಬಿಟ್ಟು ಮತ್ತಾವ ಹಳೆಯ ಅಂಶವೂ ಇಲ್ಲ. ಕೆರೆಯ ದಂಡೆಯ ಮೇಲೆ ಹಳೆಯ ಗುಡಿ ಮಾತ್ರ— ಅಲ್ಲಲ್ಲಿ ಬಿದ್ದುಹೋಗಿದೆ. ಈಗಿರುವದೆಂದರೆ ಎರಡು ಎರಡೂವರೆ ನೂರು ಈಗಿನ ಹೊಸ ಮನೆಗಳು; ಅದರಲ್ಲಿರುವ ನಮ್ಮಂತಹ "ಹೊಸ" ಜನ; ನಾವು ಕಲಿತ ಒಂದು "ಹೊಸ" ಶಾಲೆ.

ನಮ್ಮ ಶಾಲೆಯ ನೆನಪಾದ ಕೂಡಲೆ ನನ್ನ ಮೈಯುಬ್ಬುತ್ತದೆ.

ಕುಲಕರ್ಣಿ ಕಾಳಪ್ಪನವರು ಈಗ ಸತ್ತುಹೋಗಿದ್ದರೂ, ಅವರ ಹೆಸರು ಎಂದಿಗೂ ಮರೆಯುವಂತಿಲ್ಲ. ಅವರೇ ನಮ್ಮ ಹೊಸ ಸಾಲೆ ಕಟ್ಟಿಸಿದವರು. ನಮ್ಮ ಸೀನ ಅವರ ಒಬ್ಬನೇ ಮಗ. ಚಿಕ್ಕವನಿರುವಾಗಲೇ ತಾಯಿಯನ್ನು ಕಳಕೊಂಡಿದ್ದರಿಂದ ಚಿಕ್ಕಪ್ಪನಲ್ಲಿಯೇ ಸೀನ ಬೆಳೆದು ದೊಡ್ಡವನಾದದ್ದು. ಚಿಕ್ಕಪ್ಪನ ಮನೆಯ ಮಗ್ಗುಲಿಗೇ ನಮ್ಮ ಮನೆಯಿದ್ದುದರಿಂದ ಸೀನನಿಗೂ ನನಗೂ ಗೆಳೆತನ ಬೆಳೆವದ್ದೇನೂ ಹೆಚ್ಚಿನದಲ್ಲ. ಅಲ್ಲದೆ ಅವನಿಗಿಂತ ನನಗೇ ತಿಂಡಿ ಹೆಚ್ಚಾಗಿ ಸಿಗುತ್ತಿದ್ದದರಿಂದ ಸೀನ ನನಗೊಬ್ಬ ಪಾಲುಗಾರನಾಗಿದ್ದ. ಹೀಗಾಗಿ ನಮ್ಮಿರ್ವರ ಗೆಳೆತನ ಮೊದಲಿನಿಂದಲೂ ಬಹಳ ಎಲ್ಲಿ ನೋಡಿದರೂ ನಾವಿಬ್ಬರೂ ಜತೆ. ಒಬ್ಬರನ್ನೊಬ್ಬರು ಬಿಟ್ಟಿರುವದು ತೀರಾ ಜೀವದ ಮೇಲೆ ಬಂದಂತೆ.

ಸಾಲೆಯಲ್ಲಿ ಏನು ಓದಿದೆವೆಂಬವೂ ಹೇಗೆ ಓದುತ್ತಿದ್ದೆವೆಂಬವೂ ಸಾಲೆ ಬಿಟ್ಟ ಕೂಡಲೆ ಮರೆತು ಬಿಟ್ಟಿದೆ. ಆದರೆ ನಾವು ವರ್ಷ ವರ್ಷವೂ ಪಾಸಾಗುತ್ತಿದ್ದೆವೆಂಬದು ಮಾತ್ರ ನಿಜ. ಅಲ್ಲಿ ನಾವು ಕಳೆದ ಐದು ವರ್ಷಗಳು ಐದು ನಿಮಿಷಗಳಾದವಲ್ಲ? ಎಂದು ಆಗಾಗ ಚಡಪಡಿಕೆಯಾಗುತ್ತದೆ. ಆಗಿನ ಉತ್ಸಾಹ, ಆಗಿನ ಆನಂದ ಇನ್ನೆಂದಿಗಾದರೂ ದೊರೆಯಬಹುದೇ? ಎಂದು ಕಳವಳವಾಗುತ್ತದೆ.

ನಮ್ಮ ಸಾಲೆಯಲ್ಲಿ ನಾವು ನಟ್ಟ ಹೂಗಿಡಗಳು ದೊಡ್ಡವಾಗಿ ಈಗಲೂ ಹೂಬಿಡುತ್ತವೆ. ಮಾವಿನ ಸಸಿಗಳು ಮರಗಳಾಗಿ ಬುಟ್ಟಿಗಟ್ಟಲೆ ಹಣ್ಣು ಕೊಡುತ್ತವೆ. ನಾವು ಕಟ್ಟಿದ ಮಡಿಗಳೂ ಈಗಲೂ ಹಾಗೆಯೇ ಇವೆ. ನಾವು ಕುಳಿತ ಕಟ್ಟಿಗಳು ನಮ್ಮ ಆಗಿನ ದಿನಗಳನ್ನು ಇಂದಿಗೂ ನೆನಪಿಗೆ ತಂದು ಕೊಡುತ್ತವೆ. ನಾವು ಕೆಡವಿದ ಕಂಪೌಂಡು ಗೋಡೆಯು ಮಾಸ್ತರರ ಕಣ್ಣು ತಪ್ಪಿಸಿ ಹೋದದ್ದರ ಗುರುತು ಈಗಲೂ ಮಾಡಿ ಕೊಡುತ್ತದೆ. ನಮ್ಮ ಸಾಲೆಯ ಹಿಂದೆಯೇ ದೊಡ್ಡದೊಂದು ಕೆರೆಯಿದೆ. ದಂಡೆಯ ಮೇಲೆ ನಿಂತು ನೋಡಿದರೆ ಕಣ್ಣು ಕಾಣುವವರೆಗೆ ಬರೇ ನೀರೇ ಕಾಣುತ್ತದೆ. ಅದರ ಎಡಬಲಕ್ಕೆ ಎರಡು ದೊಡ್ಡ ಒಡ್ಡುಗಳಿವೆ. ಆ ಒಡ್ಡುಗಳ ಮೇಲೆ ಬಹು ಪುರಾ

ತನವಾದ ಮಾವಿನ ಮರಗಳಿವೆ. ಆ ಮಾವಿನ ಮರಗಳ ಮೇಲೆ ಕುಳಿತು ನೋಡಿದರೆ ನಮ್ಮೂರ ರಮಣೀಯತೆಯು ಕಣ್ಮನಗಳಿಗೆ ಸೊಬಗನ್ನುಣಿಸುತ್ತದೆ ಕೆರೆಯ ಬದಿಗೆ ಎರಡು ಕೂಗಳತೆಯ ವರೆಗೂ ಬತ್ತದ ಗದ್ದೆಗಳು--ಬತ್ತದ ಗದ್ದೆಗಳನ್ನು ದಾಟಿ ತೆಂಗಿನ ತೋಟಗಳು; ಅವುಗಳಾಚೆ ಬಾಳೆಯ ಬನಗಳು-ಹಲಸಿನ ಗಿಡಗಳು.

ಚೈತ್ರಮಾಸದಲ್ಲಿ ನಮ್ಮೂರ ತೇರು. ಅದಾದಮೇಲೆ ಮುಂದೆ ಒಂದೆರಡು ತಿಂಗಳು ನಾವು ಸಾಲೆಗೆ ಹೋಗುವದೇ ಕಡಿಮೆ. ಹೋದರೂ ಕೂಡ ಮಾಸ್ತರರ ಕಣ್ಣು ತಪ್ಪಿಸಿ ಗೋಡೆ ಜಿಗಿದು ಮಾವಿನ ಗಿಡಕ್ಕೆ ಹೋಗುತ್ತಿದ್ದೆವು. ನಾನಂತೂ ಒಂದು ಕಾಗದದಲ್ಲಿ ಉಪ್ಪು-ಕಾರ ಹಾಕಿಕೊಂಡು ಪಟ್ಟಣ ಮಾಡಿಕೊಂಡು ಹೋಗುತ್ತಿದ್ದೆ. ಸೀನನ ಬಳಿ ಒಂದು ಹರಿತಾದ ಚಾಕು ಇತ್ತು. ಇಬ್ಬರಿಗೂ ಗಿಡ ಹತ್ತಲು ಬರುತ್ತಿತ್ತು. ಸೀನ ಆದರಲ್ಲಂತೂ ಬಲು ಚುರುಕು. ನಾವು ಸಾಲೆ ತಪ್ಪಿಸಿ ನೀಟಾಗಿ ಒಂದು ಗಿಡಕ್ಕೆ ಹೋಗುತ್ತಿದ್ದೆವು. ಆ ಗಿಡದ ಕಾಯಿ ಬಲು ಸೀ. ಊರವರು ಕೂಡ ಅದಕ್ಕೆ 'ಕೊಬ್ಬರಿ ಮಾವು ಎಂದು ಹೆಸರಿಟ್ಟಿದ್ದರು. ಆದಕ್ಕಂತಲೇ ಅವು ಅಷ್ಟು ಸೀಯಾಗಿರು ತ್ತಿದ್ದವೋ ಏನೋ! ಅವ ಗಿಡ ಹತ್ತಿ ನಾಲ್ಕೈದು ಕಾಯಿ ಉದುರಿಸು ಸುತ್ತಿದ್ದ. ನಾನು ಆರಿಸಿ, ಸೊನೆ ನೆಲಕ್ಕೆ ಒರಸಿ. ಚುಂಚನಲ್ಲಿ ಕಟ್ಟು ತ್ತಿದ್ದೆ. ಆ ಮೇಲೆ ಇಬ್ಬರೂ ಕೂಡಿ ಗದ್ದೆಯ ಬಳಿ ಯಾರಿಗೂ ಕಾಣ ದಂತೆ ಒಂದು ಗಿಡದ ಬೇರಿಗೆ ಕುಳಿತುಕೊಳ್ಳುತ್ತಿದ್ದೆವು. ಕಾಯಿ ಹೆಚ್ಚಿ ಉಪ್ಪುಕಾರ ಹಾಕಿ ಹದ ಮಾಡಿ ತಿಂದ ಮೇಲೆ ತಿರುಗಿ ಬಿಡುತ್ತಿದ್ದೆವು.

ಒಂದು ದಿನ ಮೇಲಿನಂತೆ ಮಾವಿನಕಾಯಿ ಹದ ಮಾಡಿ ಕೊಂಡು ಒಳಿತಾಗಿ ತಿಂದೆವು. ರಾತ್ರಿ ಊಟವಾದ ಮೇಲೆ ನಾನು ಸೀನನ ಮನೆಗೆ ಹೋಗುವ ಪರಿಪಾಠ. ಅದರಂತೆ ಅಂದು ಹೋದೆ. ಸೀನ ಉಟಕ್ಕೆ ಕುಳಿತಿದ್ದ. ಚಿಕ್ಕಮ್ಮ ಬಡಿಸುತ್ತಿದ್ದಳು. ತಾಟಿನಲ್ಲಿ ಒಂದು ಕಟೆಯಾದ ಬಕ್ಕರಿಯಿತ್ತು. ಅನ್ನದ ಒಡ್ಡು ಮಾಡಿ ಅದರಲ್ಲಿ ಹುಳಿ ಹಾಕಿಸಿಕೊಂಡಿದ್ದ. ಎಡಗಡೆ ಮೂಲೆಯಲ್ಲಿ ಮಾವಿನಕಾಯಿ ಚಟ್ನಿ (ಅದರ ಬಣ್ಣದ ಮೇಲಿಂದ ಕಾಯಾಸ ಕಟ್ಟಿದ್ದು) ಮೊಸರು

ಒಂದಕ್ಕೊಂದು ತೀರ ಸಮೀಪದಲ್ಲಿ-ಬಡಿಸಿಟ್ಟಿದ್ದರು. ಇದ್ದಲ್ಲಿಯೇ ಅವು ಇವನ ಕೈ ದಾರೀಕಾಯುತ್ತ ಕುಳಿತಿದ್ದವು. ಚಿಕ್ಕಪ್ಪನ ಊಟವಾದರೂ ಇವನ ಊಟ ಮುಗಿದಿದ್ದಿಲ್ಲ. ಅವ ಕಟೆಯಾಸ ಬಕ್ಕರಿ ಮುರಿದು ಹುಳಿಯಲ್ಲಿ ಹಾಕಿ, ಅವು ಮೆತ್ತಗಾದ ಮೇಲೆ ಚಿಕ್ಕಮ್ಮನಿಗೆ ಕಾಣದಂತೆ ಮೆಲ್ಲಗೆ ತೆಗೆದು ತಿನ್ನುತ್ತಿದ್ದ. ನಾನು ನೋಡಿದೆ. ನನಗೆಲ್ಲಾ ಗುಟ್ಟು ಗೊತ್ತಾಯಿತು. ಸೀನನ ಹಲ್ಲು ಚಳತಿವೆಯೆಂದು. ಆವರೆ ಅದು ಗೊತ್ತಾದರೆ ಚಿಕ್ಕಮ್ಮ ಬಡಿಯುವಳೆಂದು ಇಬ್ಬರಿಗೂ ಹೆದರಿಕೆ.

ನಾನು ಹೋಗಿ ಮೆಲ್ಲಗೆ 'ಸೀನ' ಎಂದೆ

ಅವನಿಗೆ ಸವಡಿರಲಿಲ್ಲ. ಬೇಗ ಬೇಗ ಊಟ ಮುಗಿಸಬೇಕಾಗಿತ್ತು.

ಚಿಕ್ಕಮ್ಮ ಬಂದಳು "ಊಟವಾಯಿತೆ ಶಾಮಾ?" ಎಂದಳು.

ನಾನು 'ಹೂ' ಎಂದೆ

"ನೋಡು ನಮ್ಮ ಸೀನ ಎಷ್ಟು ತಡವಾಗಿ ಉಣ್ಣುತ್ತಾನೆ. ಇಷ್ಟು ಸಣ್ಣವನಿರುವಾಗಲೇ ಹೀಗೆ ಮಾಡಿದರೆ ಮುಂದೆ ಹೇಗೆ?''

ನಾನು ಏನೆಂದು ಉತ್ತರ ಕೊಡಲಿ? ಅಂತೂ ಶಾಮು ಒಮ್ಮೆ ಊಟ ಮುಗಿಸಿದ.

\+ + + +

ಪರೀಕ್ಷೆ ಮೂರೇ ತಿಂಗಳು ಉಳಿದಿದ್ದರೂ ನಮಗೆ ಅಭ್ಯಾಸದ ಪರಿವೆ ಇದ್ದಿಲ್ಲ. ಇಬ್ಬರೂ ಆ ಮೂರು ತಿಂಗಳುಗಳನ್ನು ಆಟ ನೋಟಗಳಲ್ಲಿ ಕಳೆದವು. ನಮ್ಮೂರಿಂದ ಎರಡು ಮೈಲಿನ ಮೇಲೆ ಒಂದು ಗುಡ್ಡವಿದೆ. ಗುಡ್ಡವೇನೊ ಬಲು ಎತ್ತರವಾಗಿದೆ. ನುಣ್ಣಗೆ ಹೊಳೆಯುತ್ತದೆ. ದುಂಡಗಿದೆ. ಗುಡ್ಡದ ತುಂದಿಗೊಂದು ಕಟ್ಟೆ ಕಟ್ಟಿದ್ದಾರೆ. ಆ ಕಟ್ಟೆಯ ಮೇಲೆ ನಿಂತು ನಮ್ಮೂರ ಗೌಡನು ವೈರಿಗಳ ಚಲನವಲನವನ್ನು ನೋಡುತ್ತಿದ್ದನಂತೆ. ಅಲ್ಲಿ ಐದಾರು ಗುಹೆಗಳಿವೆಯೆಂದು ಸುದ್ದಿ. ಅವು ಎಲ್ಲಿಯ ವರೆಗೆ ಹೋಗಿವೆಯೆಂಬದು ನಮ್ಮೂರಲ್ಲಿ ಒಬ್ಬರಿಗೂ ಗೊತ್ತಿಲ್ಲ. ಮೊನ್ನೆ ಕಳೆದ ಸುಗ್ಗಿಯಲ್ಲಿ ಜೋಳದ ನೆಲುವಿನಲ್ಲಿ ಒಂದು

ಹೊನಿಗ ಇತ್ತೆಂದೂ, ಅದು ಆಡುಗಳನ್ನೂ ದನಕರುಗಳನ್ನೂ ತಿಂದು ಗುಡ್ಡದಲ್ಲಿ ಅಡಗಿದೆಯೆಂದೂ ಸುದ್ದಿಯಿತ್ತು.

ಅಂದು ನಮ್ಮೂರ ಸಂತೆ. ಮಧ್ಯಾಹ್ನ ಸಾಲೆಗೆ ಸೂಟಿ. ಅಂದು ಗುಡ್ಡ ನೋಡಿಯೇ ಬರೋಣವೆಂದು ಹೊರಟೆವು. ಮನೆಯಲ್ಲಿ ಹೇಳುವ ಪರಿಪಾಠವಂತೂ ನಮ್ಮಲ್ಲಿರಲೇ ಇಲ್ಲ. ನಮ್ಮ ಶೌರ್ಯಕ್ಕೇನು ಕಡಿಮೆಯೆ? ನಾನು ಹೊರಡುವಾಗ ಒಂದು ಕಂದಲಿ ಅಡಗಿಸಿ ತೆಂದೆ. ಸೀನನ ಹತ್ತರ ಒಂದು ಚೂರಿ (ಚಾಕು) ಇತ್ತು. ತೋಟಗಳ ಮೇಲಿಂದ ಹಾಯ್ದೆವು. ಮಧ್ಯಾಹ್ನ ಮೀರಿ ಒಂದೆರಡು ತಾಸಾಗಿತ್ತು. ಸಂಜೆಗೆ ತಿರುಗಿ ಬರಲು ಬೇಕಾದಷ್ಟು ಹೊತ್ತಿತ್ತು. ವೈಶಾಖ ಮಾಸವಾದುದರಿಂದ ಬಿಸಿಲು ಬಲವಾಗಿದ್ದರೂ ಅಲ್ಲಲ್ಲಿ ತೇಲುವ ಮೋಡಗಳು ಸೂರ್ಯನಿಗೆ ಮರೆಯಾಗಿ ನೆಳಲು ಮಾಡುತ್ತಿದ್ದವು. ಆದರೂ ಕೂಡ ಸೆಕೆ ವಿಪರೀತವಾಗಿತ್ತು. ಗದ್ದೆಗಳನ್ನು ದಾಟಿ ತೋಟಕ್ಕೆ ಬಂದಾಗ ಮೈಯೆಲ್ಲ ಬೆವತಿತ್ತು. ತೋಟದಲ್ಲಿ ಗಾಳಿ ಸುಯ್ಯನೆ ಬೀಸುತ್ತಿತ್ತು. ಕಪ್ಪಲಿಯ 'ಸೊರ್' ಎಂಬ ಸಪ್ಪಳವು ತೋಟಗಳಲ್ಲಿ ಮರು ಮಾತಾಡುತ್ತಿತ್ತು. ಕಾಲುವೆಗುಂಟ ಹರಿಯುವ ನೀರು ಗಿಡ ಬಳ್ಳಿಗಳನ್ನೆಲ್ಲ ತಣಿಸುತ್ತಿತ್ತು. ಸೀನ ನನ್ನ ಹಿಂದಿಂದೇ ಬರುತ್ತಿದ್ದ. ಒಮ್ಮೆಲೆ 'ತಡಿ' ಎಂದ.

ನಾನು ಹಿಂತಿರುಗಿ ನೋಡಿದೆ. ಅಲ್ಲೊಂದು ಪೊದೆಯಲ್ಲಿ ನೊಣಜೇನು ನಮಗೇನೂ ಅದು ಅಚ್ಚರಿಯಾಗಲಿಲ್ಲ. ಅದೊಂದು ನಮ್ಮ ದಿನದ ಹೋರಿ ಆದರೆ ಗದ್ದಲ ಮಾಡಿದರೆ ತೋಟಗನೆಲ್ಲಿ ಬಯ್ಯುವನೋ ಎಂದು ಹೆದರಿಕೆ. ಪೊದೆಯಲ್ಲಿಯ ಒಂದು ಕಟ್ಟಿಗೆಯ ಮೇಲೆ ನೊಣಜೇನು ಕಟ್ಟಿತ್ತು. ಎಲ್ಲ ನೊಣಗಳನ್ನು ಮೆಲ್ಲನೆ ಓಡಿಸಿ ಚಾಕುವಿನಿಂದ ಜೇನು ಹುಟ್ಟು ಇಟ್ಟ ಕಟ್ಟಿಗೆ ಕೊಯ್ದು ಸೀನನಿಗೆ ಕೊಟ್ಟೆ.

ತೋಟಗನಿಗೆ ಗೊತ್ತಾಗದಂತೆ ಅಡ್ಡ ಹಾದಿಗುಂಟ ನಡೆದವು. ತೋಟಗನು ಒಂದೇ ಸಮ ಕಪ್ಪಲಿ ಹೊಡೆಯುವದರಲ್ಲಿ ತೊಡಗಿದ್ದ. ನಾವು ಮಾನಬಾವಿಯ ಪೋರೆಗುಂಟ ಕೆಳಕ್ಕೆ ಹೋದೆವು. ಅಲ್ಲಿಯೊಂದು ಹಲಸಿನಮರ. ಹಲಸಿನ ಮರವು-ಚಂಗಳಿಕೆವ್ವನು ಮಕ್ಕಳು

ಹೊತ್ತಂತೆ-ಹಣ್ಣು ಕಾಯಿಗಳನ್ನು ಹೊತ್ತುಕೊಂಡು ನಿಂತಿತ್ತು. ಅವ ರಲ್ಲಿ ನಮಗೆ ನೆಗವಬಹುದಾದ ಸಣ್ಣ ಹಣ್ಣನ್ನೊಂದು ಕೊಯ್ದೆವು. ಸೀನ ಜೇನು ಹಿಡಿದದ್ದರಿಂದ ಅದನ್ನು ತಕ್ಕೊಳ್ಳುವ ಪಾಳಿ ನನಗೇ ಬಂತು. ಹಿಂದೆಯೇ ತೋಟಿಗ ' ಹೊ ' ಎಂದು ಕೂಗಿದ ಸದ್ದಾಯಿತು. ನಾವಿಬ್ಬರೂ ಜಿಗತ ಕೊಟ್ಟೆವು.

ಎಷ್ಟು ದೂರ ಓಡಿದೆವೆಂಬದು ನೆನಪಿಲ್ಲ ಅಂತೂ ನಮ್ಮ ಓಟಕ್ಕೆ ಗುಡ್ಡ ಅತಿ ಸಮೀಪಿಸಿತು. ಆ ಮೇಲೆ ಗುಡ್ಡದ ಕೆಳಬದಿಗಿದ್ದ ಒಂದು ಚಿಕ್ಕ ಹೊಂಡದಲ್ಲಿ ಕೈಕಾಲು ತೊಳೆದು ಗಿಡದ ಬುಡಕ್ಕೆ ವಿಶ್ರಮಿಸಿದೆವು. ಕಪ್ಪಲಿಯ ' ಸೊರ್ ' ಎಂಬ ಸಪ್ಪಳ ದೂರದಿಂದ ಕೇಳುತ್ತಲೇ ಇತ್ತು. ದನಕರುಗಳು ಡುರಕಿ ಹಾಕುತ್ತಿದ್ದವು. ತೋಟದ ಬೇಲಿಗಳ ಮೇಲೆ ಕುಳಿತ ನವಿಲುಗಳ ಕೇಕು ಬಹು ದೂರದ ವರೆಗೂ ಕೇಳಬರುತ್ತಿತ್ತು. ನಾವು ಕುಳಿತ ಸ್ಥಳ ಊರಿಂದ ಎತ್ತರದ ಮೇಲೆ ಎದುರಿಗೆ ಕೆರೆಯ ನೀರು ಸದ್ದು ಮಾಡದೆ ವಿಶಾಲವಾಗಿ ಮಲಗಿದಂತೆ ತೋರುತ್ತಿತ್ತು; ಹಳ್ಳಿಯ ಸೌಖ್ಯದ ಹೆಬ್ಬಾಗಿಲದಂತೆ ಕಾಣುತ್ತಿತ್ತು. ಆ ಕೆರೆಯ ನೀರಿನ ಮಗ್ಗಲಿಗೆ ಹಸುರಿನಿಂದ ಮೆರೆವ ಗದ್ದೆಗಳು, ಅಲ್ಲಿಂದ ಎತ್ತರವಾಗಿ ಸಾಲು ಸಾಲಾಗಿ ಕಾಣುವ ತೋಟಗಳು ಆ ಸೌಖ್ಯದ ಹೆಬ್ಬಾಗಿಲಿನ ತೋರಣದಂತೆ ಕಾಣುತ್ತಿದ್ದವು.

ನಾನು ಹಲಸಿನ ಹಣ್ಣನ್ನು ಹೆಚ್ಚಿದೆ. ಬರುವಾಗ ಒಂದು ಬಾಳೇ ಎಲೆ ತರಲು ಮರೆಯಲಿಲ್ಲ. ಅದರ ಮೇಲೆ ತೊಳೆಗಳನ್ನು ಹರವಿದೆ. ಸೀನ ಜೇನತುಪ್ಪ ಅದರ ಮೇಲೆ ಹಿಂಡಿದ. ಆಗ ನಮ್ಮ ಆನಂದದ ಸೀಮೆ ಎಲ್ಲಿಯ ವರೆಗೆ ಮುಟ್ಟಿತ್ತೆಂಬದನ್ನು ವರ್ಣಿಸುವದು ಅಸಾಧ್ಯ. ನಾವು ಮಾಡಿದ ಕೆಲಸ ಎಂಥದೆಂಬ ಪರಿವೆ ನಮಗಿರಲಿಲ್ಲ. ಆದರೆ ಅದು ಆನಂದದಾಯಕವಿತ್ತು. ನಿರ್ದುಷ್ಟವಾಗಿತ್ತು. ಅದು ನಮ್ಮಿಬ್ಬರ ಗೆಳೆತನದ-ನಲುಮೆಯ ನೆನಪಿನ ಹಬ್ಬದೂಟವೆಂದೇ ನನಗೆನಿಸಿತು. ಆ ಹಬ್ಬದೂಟಕ್ಕಾಗಿಯೇ ನಾವು ನಮ್ಮ ಹೃದಯಗಳನ್ನು ಬಿಚ್ಚಿ ಹರವಿದ್ದೇವೆಂದೂ ಅದನ್ನೇ ನಾವಿಬ್ಬರೂ ಸಮರಸಮಾಡಿ ಹಂಚಿಕೊಳ್ಳುತ್ತಿದ್ದೆವೆಂದೂ ಅನಿಸಿದ್ದರೆ ಆಶ್ಚರ್ಯವೇನು ?

ಹಲಸಿನ ತೊಳೆ ತಿಂದು ಕೈ ತೊಳಕೊಂಡೆವು. ಆಗಲೇ ಹೊತ್ತು ಅಡ್ಡ ಬಿದ್ದಿತ್ತು. ನಾವು ಮೆಲ್ಲಗೆ ಗುಡ್ಡ ಏರಹತ್ತಿದೆವು. ದಾರಿಯು ಬಹು ಕಡಿದಾಗಿತ್ತು. ನಾವು ಏರುವ ದಿಕ್ಕಿಗೆ ಮಾತ್ರ ಎರಡು ಮೂರು ಕಾಲು ದಾರಿಗಳು ಕಾಣಿಸುತ್ತಿದ್ದವು. ನಾವು ಏರುತ್ತಿದ್ದಂತೆ ಡಬ್ಬು ಹಾಕಿದ ಮುಗಿಲು ಕೊಪ್ಪರಿಗೆಯು ಹರವಾಗುತ್ತಿದ್ದಂತೆ ಕಾಣಿಸುತ್ತಿತ್ತು. ಬಂಡಿಯು ಹಳಿಯಂತೆ ದುಂಡಗೆ ಕಾಣುತ್ತಿತ್ತು. ದಾರಿಯ ಬಲದಲ್ಲೊಂದು ಗವಿ. ಅದರೊಳಗೆ ನೀರು. ನೀರು ಕುಡಿಯಲು ಬಂದು ಹೋದ ಎಷ್ಟೋ ಪ್ರಾಣಿಗಳ ಹೆಜ್ಜೆ ಕಾಣುತ್ತಿದ್ದವು. ನಾನು ನನ್ನ ಕಂದಲಿಯನ್ನು ಗಟ್ಟಿಯಾಗಿ ಹಿಡಿದಿದ್ದೆ. ಧೈರ್ಯವು ಇಮ್ಮಡಿಯಾಯಿತು. ಸೀನನೂ ತನ್ನ ಚೂರಿಯನ್ನು ಹೊರ ತೆಗೆದ. ಒಂದೇ ಸಮನೆ ಗುಡ್ಡ ಏರಿದೆವು ಅಷ್ಟೇನೂ ಆಯಾಸವಾದಂತೆ ಅನಿಸಲಿಲ್ಲ. ನೆಳಲು ಕೊಡುವಂಥ ದೊಡ್ಡ ಗಿಡಗಳಿರದಿದ್ದರೂ ತಂಪಾದ ಗಾಳಿ ಬೀಸಿ ಬಿಸಿಲ ಸೆಕೆಯನ್ನು ಕಡಿಮೆ ಮಾಡುತ್ತಿತ್ತು. ನಾವು ಗುಡ್ಡದ ತುದಿಗೆ ಹೋಗಿ ಕ್ಷಣಕಾಲ ವಿಶ್ರಮಿಸಿದೆವು. ಎಂಟೂ ದಿಕ್ಕುಗಳು ಬಾಗಿಲು ತೆರೆದು ನಿಂತಂತೆ ಭಾಸವಾಯಿತು. ಕಣ್ಣು ದಣಿಯುವವರೆಗೂ ನೆಲ-ನೀರು ಕಾಣುತ್ತಿದ್ದವು. ಅಲ್ಲಲ್ಲಿ ಗಿಡಗಳ ಗುಂಪುಗಳಲ್ಲಿ ಅಡಗಿದ ಮನೆಗಳು ನಾಲ್ಕೂ ಕಡೆಗೆ ಕಾಣಿಸುತ್ತಿದ್ದವು. ಅವುಗಳೊಳಗಿಂದ ಹೊರಟ ಹೊಗೆಯು ಮುಗಿಲಲ್ಲಿ ಮುಡುಡೆ ಮುದುಡೆಯಾಗಿ ಮೋಡಗಳ ಜತೆಗೆ ತೇಲುತ್ತಿತ್ತು. ಕೆರೆ ಹೊಂಡಗಳು ಉದುರಿಬಿದ್ದ ಚೊಗಚೀ ಹೂವಿನಂತೆ ಒಪ್ಪುತ್ತಿದ್ದವು. ಬೆಳ್ಳಗೆ ಕಾಣುವ ಕೆರೆ-ಹೊಂಡಗಳ ಜತೆಗೆ ಹಸರು ಗದ್ದೆಗಳು ತೋಟಗಳು-ಮರುಭೂಮಿಗಳು ಸಾಲುಸಾಲಾಗಿ ಹೆಣೆದ ಕೌದಿಯ ಅರಿವೆಯಂತೆ ಬಲು ಮನೋಹರವಾಗಿ ಕಾಣುತ್ತಿದ್ದವು. ತೇಲುವ ಮೋಡಗಳು ಸಮೀಪಕ್ಕೆ ಬಂದಂತಾಗಿ, ಅವುಗಳಾಚೆ ಇನ್ನೂ ಮುಗಿಲಿದೆಯಲ್ಲ! ಎಂದು ನಮಗೆ ಅಚ್ಚರಿಯೂ ಕುತೂಹಲವೂ ಉಂಟಾಗುವವು. ಕ್ಷಣಕಾಲ ನಾವು ಎಲ್ಲವನ್ನೂ ಮರೆತೆವು. ಗುಡ್ಡದ ಕೆಳಬದಿಗೆ ಕುರಿಗಳು ಮೇಯುತ್ತಿದ್ದವು. ಅವುಗಳ ಹಿಂಡಿನಲ್ಲಿದ್ದ ನಾಯಿಗಳು ಅತ್ತಿತ್ತ ಅಡ್ಡಾಡುತ್ತಿದ್ದವು.

ಕುರುಬರು ಗಿಡದ ನೆಳಲಲ್ಲಿ ವಿಶ್ರಮಿಸುತ್ತಿದ್ದರು.

ನಾವು ಆಚೇ ಬದಿಯನ್ನು ನೋಡಲು ಹೊರಟೆವು. ಮೆಲ್ಲಗೆ ಹೆಜ್ಜೆಯನ್ನು ಇಡುವಾಗ ನಾವು ಒಬ್ಬರ ಕೈಯನ್ನೊಬ್ಬರು ಹಿಡಿದಿದ್ದೆವು ಅಬ್ಬಾ! ಆ ಬದಿಯು ಅತಿ ಭಯಾನಕವಾಗಿತ್ತು. ಗುಡ್ಡವು ಆ ಬದಿಗೆ ಅತಿ ಕಡಿದಾಗಿತ್ತು. ಕೋಟೆಯ ಗೋಡೆಯಂತೆ ಒಮ್ಮೆಲೆ ಏರಿ ಬಿಟ್ಟಿತ್ತು. ತಳದಲ್ಲಿ ದಟ್ಟವಾದ ಅಡವಿ. ಮೇಲಿಂದ ಕೆಳಗೆ ನೋಡಿದಂತೆ ಚಿಕ್ಕ ಚಿಕ್ಕ ಕಂಟಿಗಳು-ಅವುಗಳ ಮರೆಗೆ ಸಣ್ಣ ಹೊದರಿನಂತೆ ಕಾಣುವ ಗುಹೆಗಳು-ನನಗಂತೂ ಮುಂದೆ ಹೋಗುವ ಧೈರ್ಯವಾಗಲಿಲ್ಲ. ಸೀನ ಧೈರ್ಯವಾಗಿ ಮುಂದೆ ನಡೆದ. ನನಗೂ ಧೈರ್ಯ ಕೊಡುತ್ತಿದ್ದ.

ಬದಿಗೆ ಸದ್ದಾಯಿತು. ಕುರುಬರು ಕೇಕೆ ಹೊಡೆಯುತ್ತಿದ್ದರು. ನಮಗೆ ತಿರುಗಲು ಸನ್ನೆ ಮಾಡುತ್ತಿದ್ದರು. ನಾವು ಗಡಿಬಿಡಿಯಿಂದ ಬರುವಾಗ ನಮ್ಮ ಕಾಲು ತಾಗಿ ಒಂದು ಕಲ್ಲು ಉರುಳಿತು. ಉರುಳಿದ್ದೊಂದೇ ತಡ; ಒಂದೇ ಸಮ ಕೆಳಕ್ಕೆ ಹೊರಟಿತು.

ಭಯಂಕರವಾದ ಸದ್ದು! ಗುಡುಗಿದಂತೆ ಕೇಳಿತು. ಕಿವಿಗಳು ಗಡಚಿಕ್ಕಿದವು. ನಾಯಿಗಳು ಬೊಗಳಹತ್ತಿದವು ಕುರಿಗಳು ಒಂದೆಡೆ ಕೂಡಿದವು. ಕುರುಬರು ನಮ್ಮೆಡೆ ಧಾವಿಸಿ ಬರುತ್ತಿದ್ದರು. ನನ್ನ ಕಾಲಲ್ಲಿ ತ್ರಾಣವೇ ಹೋದಂತಾಯಿತು. ಯಾವದೋ ಒಂದು ಪ್ರಾಣಿ ಜಿಗಿದು ಅಡವಿಯಲ್ಲಿ ಓಡಿಹೋಯಿತು. ಸೀನ ನನ್ನ ಕೈ ಹಿಡಿದು ಓಡಹತ್ತಿದ.

ಸೀನ ಒಮ್ಮೆಲೆ ಮುಕ್ಕರಿಸಿ ಬಿದ್ದ! ತಲೆಗೆ ಗಾಯವಾಗಿ ನೆತ್ತರ ಬರಹತ್ತಿತು. ಎಂಥ ಭಯಂಕರ ಸ್ಥಿತಿಯದು. ಅತ್ತ ಹೊನಿಗನ ಭಯ; ಇತ್ತ ಸೀನನ ಗಾಯ. ನಾನಂತೂ ಜೀವದ ಆಸೆ ಬಿಟ್ಟು ಸೀನನ ಬಳಿ ಕುಳಿತೆ. ದಣಿವು ಹೆದರಿಕೆಗಳಿಂದ ನನಗೂ ಜೋಲಿ ಹೋಗುತ್ತಿತ್ತು. ಕುರುಬರಿನ್ನೂ ದೂರದಲ್ಲಿಯೆ ಇದ್ದರು. ನಾನು ಸೀನನನ್ನು ಎಬ್ಬಿಸಿ ತೊಡೆಯ ಮೇಲೆ ಮಲಗಿಸಿದೆ. ಅವನ ಮೈಯಲ್ಲಿ ಎಚ್ಚರವಿದ್ದಿಲ್ಲ. ದೋತರ ಚುಂಗನ್ನು ಹರಿದು ಗಾಯಕ್ಕೆ ಬಿಗಿದೆ.

ಮುಂದೆ ನನ್ನ ಕಣ್ಣು ಕತ್ತಲುಗುಡಿಸಿತು· ಹಿಂದಕ್ಕೆ ಬಿದ್ದುಬಿಟ್ಟೆ.

\+ + + +

ಎಚ್ಚರಾದಾಗ ನಾನು ಮನೆಯಲ್ಲಿ ಹಾಸಿಗೆಯ ಮೇಲೆ ಮಲಗಿದ್ದೆ ವ್ಮೈ ಕೆಂಡದಂತಾಗಿತ್ತು.

\+ + + +

ಎಷ್ಟೋ ದಿನಗಳು ಹೋದವು. ಸೀನನ ಗಾಯ ಮಾದಿತ್ತು. ನನ್ನ ಬೇನೆಯೂ ಗುಣವಾಗಿತ್ತು. ಒಂದು ದಿನ ನಾವಿಬ್ಬರೂ ಸಾಲೆ ಬಿಟ್ಟ ಮೇಲೆ ಕೆರೆಯ ದಂಡೆಗೆ ಮಾತಾಡುತ್ತಾ ಕುಳಿತಿದ್ದೆವು. ಮಾತಿಗೆ ಮಾತು ಬಂತು. ನಾನಂದೆ, “ಸೀನ. ಅವತ್ತಿನ ಗುಡ್ಡದ ನೆನಪು ಕಡೆ ತನಕ ಉಳಿಯುವಂತಾಯ್ತು’’

ಅವ ಮೆಲ್ಲಗೆ ತನ್ನ ಹಣೆಯ ಮೇಲೆ ಕೈಯಾಡಿಸಿದ.

# ಪೂಜೆ

ಇಂದು ರಾಯರ ಮನೆ ಔತನ. ನಿನ್ನೆ ರಾತ್ರಿ ಅದೇಕೋ ಸ್ವಲ್ಪ ಬೇಸರ ಬಂದದ್ದರಿಂದ ಊಟ ಮಾಡಿದ್ದಿಲ್ಲ.

ಮಧ್ಯಾಹ್ನ ಆಯಿತು. ಆರು ತಾಸು ಮಿಕ್ಕಿ ಹೋಯಿತು. ಹೊಟ್ಟೆ ಹಸಿಯಿತು. ಜೀವ ನಿಲ್ಲಲಿಲ್ಲ. ಅಡಿಗೆಯಾಗಿದೆಯೋ ನೋಡಲು ರಾಯರ ಮನೆಯ ಕಡೆ ಹೋದೆ. ಸುಬ್ಬಮ್ಮ ಜಳಕ ಮಾಡಿ ಬಾ ಎಂದು ಹೇಳಿದರು.

ವೈದಿಕರೆಂದರೆ ಎಲ್ಲಾ ಸ್ವಲ್ಪ ತೋದರೆಯೋ! ಅವರಲ್ಲಿ ಸಹನ ಶಕ್ತಿ ಹೆಚ್ಚು ಬೇಕು. ಊಟಕ್ಕೆ ಹೇಳುವವರು ಬರೇ ಊಟಕ್ಕಷ್ಟೇ ಹೇಳುವದಿಲ್ಲ. ಅದರ ಜೊತೆಗೆ ದೇವರ ಪೂಜೆ ದಿಂಡರ ಪೂಜೆ ಇದ್ದವು ಗಳೇ! ದಕ್ಷಿಣೆಯನ್ನಾದರೂ ಸ್ವಲ್ಪ ಹೆಚ್ಚಿಗೆ ಕೊಡುತ್ತಾರೆಂದಿರೇನು? ನಮ್ಮಂಥ ಹುಡುಗರಿದ್ದ ಮೇಲಂತೂ ದುಡ್ಡೋ ಎರಡು ದುಡ್ಡೋ ಕೊಟ್ಟು ಕಳುಹಿಸುತ್ತಾರೆ.

ಆಗಲೇ ಸ್ನಾನ ಮಾಡಿಬಂದು ದೇವರ ಪೂಜೆಗೆ ಕುಳಿತೆ. ಹೊಟ್ಟೆ ಬಹಳ ಹಸಿದಿತ್ತು. ಮೇಲಾಗಿ ಚಹಾದ ಅಂಗಡಿಗೆ ಹೋಗಿ ಅಭ್ಯಾಸ ವಿದ್ದಿಲ್ಲ. ರೊಕ್ಕವಿದ್ದರಷ್ಟೇ ಹೋಗುವುದು!

ಸುಬ್ಬಮ್ಮ ಕರಿಗಡಬು ಕರಿಯುತ್ತಿದ್ದರು. ಘಮ್ಮಗೆ ವಾಸನೆ ಬರುತ್ತಿತ್ತು.

ರಾಯರು ಬಂದು 'ಏನಪ್ಪ, ಇಂದು ಹಬ್ಬ ದೊಡ್ಡದು; ದೊಡ್ಡ ದೇವರನ್ನು ತೆಗೆಯಬೇಕು' ಎಂದರು.

ನನ್ನ ಕೈಕಾಲೇ ಹೋದವು. ದೊಡ್ಡ ದೇವರೆಂದರೆ ತುಸುವೇ! ಎಷ್ಟು ತುಸು ಎಂದರೂ ನೂರರ ಮೇಲಾದರೂ ಇರಬಹುದು. ಕೃಷ್ಣಾಜಿನ ಪೆಟ್ಟಿಗೆಯಲ್ಲಿ ಒಟ್ಟಿಗೆ ನೆಮ್ಮದಿಯಾಗಿ ಇಟ್ಟಿದ್ದರು. ಮೇಲಿನ ಧೂಳು ಕೊಡವಿ ತೆಗೆದೆ.

ಹೊಟ್ಟೆಯೇನೋ ಬಲವಾಗಿ ಹಸಿದಿದ್ದಿತು. ಸುಬ್ಬಮ್ಮ ಕರಿಗಡಬು ಕರಿಯುವದು ಇನ್ನೂ ಮುಗಿದಿರಲಿಲ್ಲ.

ನಿರ್ವಾಹವಿಲ್ಲದೆ ಎಲ್ಲಾ ದೇವರನ್ನು ಒಂದು ತಬಕದಲ್ಲಿ ಸುರುವಿದೆ. ಮೇಲೆ ನೀರು ಹೊಯ್ದು, ಒರಸಿದೆ, ಅಲ್ಲಲ್ಲಿ ಸ್ಥಳ ನೋಡಿ ಎಲ್ಲಾ ದೇವರನ್ನು ಹೊಂದಿಸಿ ಇಟ್ಟೆ.

ಈಗ ಮಾತ್ರ ಕೈ ಸ್ವಲ್ಪ ಜಲ್ದು ಬಿಟ್ಟೆ. ಗಂಧ ತೆಯ್ದು- ತೆಯ್ದೇ ತೆಯ್ದೆ. ಹಸಿವೆಯಿಂದ ಕೈಯಲ್ಲಿ ಸತ್ವ ಹೋಗಿತ್ತು. ಎಲ್ಲಾ ದೇವರಿಗೆ ಕೂಡಿ ಮೊದಲು ಸಲ ಹಾಕುವ ಚಟ್ಣೀಮುದ್ದಿಯಷ್ಟಾದರೂ ಗಂಧ ಬೇಡವೇ?

ಇತ್ತಿತ್ತಲಾಗಿ ದೇವರ ಪೂಜೆಯ ರೂಢಿ ಸ್ವಲ್ಪ ತಪ್ಪಿದ್ದರಿಂದ ಅನ್ನಿ (ಯಾಕಂದರೆ ನಾನು ಇಂಗ್ಲಿಷ ಕಲಿಯಲಿಕ್ಕೆ ಹತ್ತಿದಂದಿನಿಂದ ದೇವರ ಪೂಜೆ ಮಾಡುವದು ಸ್ವಲ್ಪ ಅವಮಾನವೆನಿಸುತ್ತಿತ್ತು) ಇಲ್ಲವೆ ದೇವರ ಪೂಜೆ ಮಾಡುವಾಗಿನ ಹೊಟ್ಟೆ ಹಸುವಿನಿಂದ ಅನ್ನಿ, ಮಂತ್ರ ಸ್ವಲ್ಪ ಅಪದ್ಧಾಗಿತ್ತು; ಆದರೂ ನಮ್ಮ ರಾಯರಿಗೇನೂ ಮಂತ್ರ ಬರುತ್ತಿದ್ದಿಲ್ಲ. ಅವರಲ್ಲಿ ಹೇಗೆ ಚಕ್ಕಡಿ ಹೊಡೆದರೂ ನಡೆಯುತ್ತಿತ್ತು.

ಅಷ್ಟು ಹೊತ್ತಿಗೆ ಗಂಧ ತೆಯ್ಯುವದಾಯ್ತು. ರಾಯರು ಹೊರಗಿನಿಂದ ಬಂದು ಸುಬ್ಬಮ್ಮನವರಿಗೆ, 'ಅಡಿಗೆ ಸಾವಕಾಶವಾಗಿ ಆಗಲಿ; ನನಗೇನೂ ಅಷ್ಟು ಹೊಟ್ಟೆ ಹಸಿವು ಆಗಿಲ್ಲ' ಎಂದರು.

ನನಗೆ ಅವರ ಮಾತು ಕೇಳಿ ಬಹಳ ಕಸಿವಿಸಿಯಾಯಿತು. ಅವರಿಗೆ ನನ್ನ ಹೊಟ್ಟೆ ಹತ್ತಿದ್ದರೆ ಅವರೆಂದಿಗೂ ಹಾಗನ್ನುತ್ತಿದ್ದಿಲ್ಲ ಎನಿಸಿತು.

ಸುಬ್ಬಮ್ಮ ಕರಿಗಡಬು ಕರಿಯುವದಾಯ್ತು. ನನ್ನ ದೇವರ ಪೂಜೆಯೂ ಆಗುವ ಸಮಯ. ಸುಬ್ಬಮ್ಮನೋರ ಕೂಸು ಅಲ್ಲಿಯೇ ದುಪ್ಪಟಿಯ ಮೇಲೆ ಮಲಗಿತ್ತು. ರಾಯರು ಯಾರದೋ ಸಂಗಡ ಹೊರಗೆ ಮಾತಾಡುತ್ತ ಕುಳಿತಿದ್ದರು.

ಸುಬ್ಬಮ್ಮ ಕೊಡ ಬಗಲಲ್ಲಿಟ್ಟುಕೊಂಡು, ‘ ಈಗ ಸೀನೀರು ತಗೊಂಡು ಬರ್ತೇನಿ. ಕೂಸು ಎದ್ದೀತು, ಸ್ವಲ್ಪ ಲಕ್ಷ್ಯವಿರಲಿ, ಎಂದು ಹೇಳಿ ಹೊರಟು ಹೋದರು.

ಕರಿಗಡಬು ಕರಿಯುವದಾದರೂ ಅದರ ಖಮ್ಮನ್ನ ವಾಸನೆ ಹೋಗಿದ್ದಿಲ್ಲ.

ನಾನು ದೇವರ ಕಟ್ಟೆ ಬಿಟ್ಟು ಇಳಿದೆ.

× × × ×

ಹಿಂದೆ ಸದ್ದಾಯಿತು. ಕೂಸು ಅರೆಗಣ್ಣು ತೆಗೆದು ಕನಸಿನಲ್ಲೇ ನಗುತ್ತಿತ್ತು.

× × × ×

ಸುಬ್ಬಮ್ಮ ನೀರು ತಕ್ಕೊಂಡು ಬರುವ ಸಮಯ. ನೀರಡಿಕೆ ಬಲವಾಯಿತು. ನೀರು ಕುಡಿಯಹತ್ತಿದೆ.

“ ಏನಪ್ಪಾ, ಹಾಳುಗಳ್ಳಿನ ಮೇಲೆ ನೀರು ಕುಡಿಯಬೇಡ. ”

“ ಏನೂ ಆಗುವದಿಲ್ಲ. ಬಹಳ ನೀರಡಿಕೆ. ”

“ಇದೀಗ ಎಲೆ ಹಾಕುತ್ತದೆ ” ಎಂದರು ಸುಬ್ಬಮ್ಮ.

× × × ×

ಸುಬ್ಬಮ್ಮನವರಿಗೇನೋ ಸ್ವಲ್ಪ ಅನುಮಾನ. ಕಡಬು ಇದ್ದಕ್ಕಿದ್ದ ಹಾಗೆ ಇರಲಿಲ್ಲ.

ಊಟಕ್ಕೆ ಕೂತಾಗ ೮–೧೦ ಕರಿಗಡಬು ತಿನ್ನುವ ನನಗೆ ಅಂದು ಒಂದೆರಡು ತಿನ್ನಬೇಕಾದರೆ ಸಾಕುಬೇಕಾಯಿತು.

ಸುಬ್ಬಮ್ಮನವರ ಅನುಮಾನ ದೃಢವಾಯಿತು.

ಅವರ ಮನೆಯ ನನ್ನ ದೇವರ ಪೂಜೆ ಅದೇ ಕಡೆಯದಾಯಿತು.

# ಮೇರೀ-ಜಾನ

ಅದೊಂದು ದಿನ. ಈಸ್ಟ ಇಂಡಿಯಾ ಕಂಪನಿಯು ಸ್ಥಾಪಿಸಲ್ಪಟ್ಟ ನಾಲ್ಕಾರು ವರ್ಷಗಳ ಮೇಲಿನದು. ಪೂರ್ವದ ಸೂರ್ಯನಿನ್ನೂ ಮುಳುಗಿರಲಿಲ್ಲ; ವಸಂತಋತುವಿನ್ನೂ ಹೋಗಿದ್ದಿಲ್ಲ.

ಇಂಗ್ಲಂಡಿನಲ್ಲಿಯೂ ಅದೇ ದಿನ. ಚಳಿಗಾಲವಿನ್ನೂ ಬಿಟ್ಟಿದ್ದಿಲ್ಲ. ಬರ್ಫವು ಹಿಂಜಿದ ಅರಳೆಯಂತೆ ಒಂದೇಸವನೆ ಬೀಳುತ್ತಿತ್ತು; ವಸಂತನ ಆಗಮನ ಮುಂದಿದೆಯೆಂದು ಹೇಳುತ್ತಿತ್ತು. ಅದಕ್ಕಂತಲೇ ಇಂಗ್ಲಂಡವು, ದಿನವೂ ಬೆಳಗೂ ಪೂರ್ವಕ್ಕೆ ನೋಡುತ್ತಿತ್ತು.

ಲಂಡನ್‌ಪಟ್ಟಣದ ಆಚೇ ತುದಿಯಲ್ಲಿಯೂ ಅದೇ ದಿನ. ಹಳೆಯದಾದ ಒಂದು ಮುರುಕು ಹಂಚಿನಮನೆ. ಮನೆಯಮೇಲೆ ಬರ್ಫ ಬಿದ್ದು ಅದೇನು ಹಂಚೊ ಹಂಜಿಯೋ ಎಂಬ ನೋಡುವವರಿಗೆ ಸಂದೇಹ. ಒಳಗಿದ್ದವನಿಗೆ ಅದು ಬರ್ಫವೆಂದೇ ಗೊತ್ತು; ಅಂತಲೇ ಆವ ಒಂದು ಮಿದುವಾದ ಹಳೆಯ ಕಂಬಳಿ ಹೊದ್ದುಕೊಂಡು ಕುಳಿತಿದ್ದ. ಮೋರೆ ನೋಡಿದರೆ ಅದಾವುದೋ ಚಿಂತೆ ಆವರಿಸಿದಂತೆ ತೋರುತ್ತಿತ್ತು. ಹಣೆಯ ಮೇಲೆ ಬಿದ್ದ ಏಳೆಂಟು ನೀರಿಗೆಗಳೇ ಅದಕ್ಕೆ ಸಾಕ್ಷಿ. ಅವನ ಎದುರಿಗೂ ಮಗ್ಗಲಿಗೂ ನಾಲ್ಕೆಂಟು ಅರಿವೇ ಗಂಟುಗಳು ಧೂಳು ಹೊತ್ತುಕೊಂಡು ಬಿದ್ದಿದ್ದವು. ಎಡಕ್ಕೆ ಎರಡು ಮುರುಕು ಮಗ್ಗಗಳು. ಇವನೊಬ್ಬ ನೇಕಾರನೆಂದು ತಟ್ಟನೆ ಹೇಳುತ್ತಿದ್ದವು.

ಈಗೊಂದು ಗಂಟೆಯಿಂದಲೂ ಅವ ಹಾಗೇ ಕುಳಿತಿರಬೇಕು. ಹಾಗೆ ಕುಳಿತುಕೊಳ್ಳುವದು ಅವನಿಗೆ ಅಭ್ಯಾಸವೆಂದು ನಾವಂತೂ ಹೇಳಲಾರೆವು; ಯಾಕಂದರೆ ಅವ ಮುದುಕನೇನೂ ಅಲ್ಲ. ವಯಸ್ಸು ನಲವತ್ತೈದರ ಮೇಲಾಗಿರಬಹುದೆಂದು ಮೋರೆ ಮೈಕಟ್ಟು ಹೇಳುತ್ತಿದ್ದವು.

ಅವನ ಹಿಂದೆ ಬಾಗಿಲು ಕಿರ್ರೆಂದು ಸದ್ದಾಯಿತು. ಬಾಗಿಲಪಡು ಕಿನಿಂದ ಒಳಗೆ ಉರಿಯುವ ಅಗ್ಗಿಷ್ಟಿಗೆ ಕಾಣುತ್ತಿತ್ತು. ಆದರೂ ಅವ ಕುಳಿತ ಸ್ಥಳ ಬಿಟ್ಟು ಕದಲಲಿಲ್ಲ-ಅತ್ತ ಕಡೆ ನೋಡಲಿಲ್ಲ. ಅವನಿಗೆ ಬಂದವರಾರೆಂದು ಗೊತ್ತಿರಬೇಕು; ನಿಶ್ಚಯವಾಗಿ ಗೊತ್ತಿರಬೇಕು. ತನ್ನ ಪಾಲುಗಾರ್ತಿ ಮೇರಿಯೆಂದು. ಆ ಬಡ ನೇಕಾರನಲ್ಲಿ ಅವಳಲ್ಲದೆ ಮತ್ತಾರು ಅವನ ದುಃಖದಲ್ಲಿ ಭಾಗಿಯಾಗಬೇಕು ?

ಅವಳಿಗೆ ಅದು ನಡೆದದ್ದು ಹೊಸದೆಂದು ಅನಿಸಲಿಲ್ಲ. ಇಂಥ ಎಷ್ಟೋ ಪ್ರಸಂಗಗಳು ಕಳೆದಿರಬೇಕೆಂದು ಅವಳ ಮೋರೆಯೇ ಹೇಳು ತ್ತಿತ್ತು. ಅವಳು ಹೆಚ್ಚು ಸದ್ದು ಮಾಡದೆ ಅವನೆದುರಿಗೆ ಬಂದಳು, ಅವ ಮೋರೆ ನೋಡುವ ಅವಶ್ಯಕತೆಯೇನು ? ತನ್ನಂತೆಯೇ ಅವಳದೂ ಒಣಗಿದ ಮುಖವೆಂದೂ, ಅವಳವೂ ಹರಕು ಮಾಸಿದ ಅರಿವೆಗಳೆಂದೂ ಅವನಿಗೆ ಖಂಡಿತ ಗೊತ್ತು.

ಅವಳು ಅವನೆದುರಿಗೆ ಕುಳಿತ ಮೇಲೆ, ಅವನು ಹಣೆಗೆ ಹಚ್ಚಿದ ಕೈಯನ್ನು ಮೆಲ್ಲಗೆ ತೆಗೆದು, "ಜಾನ ಎಷ್ಟು ಚಿಂತೆಯಿದು! ಮುಂಜಾನೆ ಯಿಂದಲೂ ಒಂದೇಸವನೆ ಕುಳಿತಿದ್ದಿ- ಇನ್ನೂ ಪ್ರಯತ್ನಮಾಡು. ಯಾರ ಹೊಟ್ಟೆಯಲ್ಲಾದರೂ ದೇವರು ಹೊಕ್ಕಾನು. ಇವತ್ತಾದರೂ ನಾಲ್ಕು ಪೆನ್ಸಿನ ಅರಿವೆ ಖರ್ಚಾದರೆ ಈಗೆರಡು ದಿನ ಉಪವಾಸವಿದ್ದ ಈ ಹೊಟ್ಟೆಗಳಿಗೆ ತುಣುಕು ರೊಟ್ಟಿ ಸಿಕ್ಕೀತು. ಸುಮ್ಮನೆ ಕುಳಿತರೆ ಬರುವದೇನು ?

ಜಾನನು ಚಿಂತೆಯಿಂದ ಭಾರವಾದ ತಲೆಯನ್ನು ಮೆಲ್ಲಗೆ ಎತ್ತಿದ. ಎರಡೂ ಕಣ್ಣುಗಳು ಗರಗರನೆ ತಿರುಗಿದವು. ಹಸಿವೆಯ ದಾಹದಿಂದ ತುಟಿಗಳು ಒಣಗಿ ಹೋಗಿದ್ದವು. ಅವ ಹೇಳಿದ; "ಮೇರಿ, ನೀನು ಬಲ್ಲಂತೆ ಈಗೆಂಟು ದಿನಗಳಿಂದಲೂ ತಿರುಗುತ್ತಿದ್ದೇನೆ. ಒಂದು ಪೆನ್ಸಿನ ಅರಿವೆಯು ಖರ್ಚಿಲ್ಲ. ಮಗ್ಗಕ್ಕೆ ಕೆಲಸವಿಲ್ಲದೆ ಬಹು ದಿನಗ ಳಾಗಿ ಹೋದವು. ಇದ್ದ ಅರಿವೆಯಾದರೂ ಖರ್ಚಾದರೆ ವರ್ಷಾರು ತಿಂಗಳ ಗಂಜಿಯಾದರೂ ಆಗುತ್ತದೆ. ಆದರೇನು ? ಪೇಟಿಯಲ್ಲಿ

ನಮ್ಮ ಅರಿವೆ ಮಾತಾಡಿಸುವವರೇ ಇಲ್ಲ. ಎಲ್ಲಿ ನೋಡಿದರೂ ಇಂಡಿಯದ ಅರಿವೆಯೇ ಅರಿವೆ; ಅದರ ಮಾತೇ ಮಾತು ; ಅದರದೇ ಹೆಚ್ಚಳ. ಅದು ನಯವಾದುದೆಂದೂ ಅಗ್ಗವಾದುದೆಂದೂ ನನಗೂ ಗೊತ್ತು. ಆದರೂ ದೇವರು ಹೊಟ್ಟೆಯೊಂದನ್ನು ನಮಗೆ ಹಚ್ಚಿದ್ದಾನಲ್ಲ? ಮನೆತನದ ಉದ್ಯೋಗ ಬಿಟ್ಟು ಮಾಡಬೇಕಾದರೂ ಏನು ? ಅಂತೆಯೇ ಇಷ್ಟೆಲ್ಲ ಗೊತ್ತಿದ್ದರೂ ಮತ್ತೆ ಅರಿವೆ ತಕ್ಕೊಂಡು ಪೇಟೆಗೆ ಹೋಗುತ್ತೇನೆ........"

ಜಾನನಿಗೆ ಹೆಚ್ಚು ಮಾತಾಡುವದಾಗಲಿಲ್ಲ. ಉಸ್ಸೆಂದು ಸುಮ್ಮನೆ ಕುಳಿತ.

ಮೇರಿಯ ಕಣ್ಣಲ್ಲಿ ಒಂದೆರಡು ಹನಿ ನೀರು ಹೊರಗೆ ಬರುವಾಗಲೇ ಇಂಗಿ ಹೋದವು. ಅವಳೂ ಉಸುರ್ಗರೆಯುತ್ತ ಕುಳಿತಳು. ಅವಳಾದರೂ ಏನೆಂದು ಹೇಳಬೇಕು? "ಆಜೇಮನೇ ಬಟ್ಲರಸಾಹೇಬರಲ್ಲಿ ಹೋಗಿದ್ದಿರೇನು ? " ಎಂದು ಕುತೂಹಲದಿಂದ ಅವನ ಮೋರೆಯನ್ನೇ ನೋಡಹತ್ತಿದಳು.

ಜಾನನು ತಿರಸ್ಕಾರದಿಂದ ಒಮ್ಮೆ ನೋಡಿದ. ಆಮೇಲೆ ತಗ್ಗಿದ ದನಿಯಲ್ಲಿ, " ನಮ್ಮ ದಪ್ಪಾದ ಉರುಟು ಅರಿವೆ ಆ ಸಾವುಕಾರನ ಮನಸ್ಸಿಗೆ ಹೇಗೆ ಬರಬೇಕು ? ಇಂಡಿಯದ ನಯವಾದ ಅರಿವೆ ಬಿಟ್ಟು ಇವನ್ನೇಕೆ ಕೊಂಡಾನು? "

ಮೇರಿ ಕರುಣೆಯಿಂದ, "ಹೇಳಿಕೊಳ್ಳಿರಿ, ಅವರೇ ಹೊಟ್ಟೆಗೆ ಹಾಕಿದಂತೆ ಆಗುತ್ತದೆಂದು ಹೇಳಿರಿ. "

ಜಾನನ ಕಣ್ಣು ಕೆಂಪೇರಹತ್ತಿದವು. " ಮೇರೀ, ಏನು ಮಾತಾಡುತ್ತಿದ್ದೀಯೇ! ಸ್ವಾಭಿಮಾನದ ಸೆಲೆ ನಿನ್ನಲ್ಲಿ ಬತ್ತೇ ಹೋಯಿತೇ! ಇದಕ್ಕಿಂತ ಬಿಕ್ಕೇ ಬೇಡುವದು ಒಳಿತಲ್ಲವೇನು? ಕಳವು ಅದಕ್ಕಿಂತಲೂ ಹೆಚ್ಚಲ್ಲವೆ? ಹೊಟ್ಟೆ, ನೀನಾದರೂ ಏನು ಮಾಡೀ!"

ಹೊರಗೆ ಬರ್ಫು ಬೀಳುವದು ಕಡಿಮೆಯಾಗಿತ್ತು. ಸೂರ್ಯ ಕ್ಷಿತಿಜದಿಂದ ತುಸು ಎತ್ತರದ ಮೇಲೆ ಒಂದು ಸ್ಥಳ ನೋಡಿ ಕುಳಿ

ತಿದ್ದ. ತನ್ನ ಸಾಸಿರ ಕಣ್ಣುಗಳಿಂದ ಜಗತ್ತನ್ನು ನಿರುಕಿಸುತ್ತಿದ್ದ. ನಡೆದ ಸಂಗತಿಯನ್ನು ನೋಡುವದಕ್ಕೇನೋ ಎಂದು, ಅವನ ಒಂದೆರಡು ಕಿರಣಗಳು ಮುರುಕುಮನೆಯ ಕಿಡಿಕಿಯಲ್ಲಿ ಪಾರಾಗಿ ಅವರಿದ್ದಲ್ಲಿ ಬಿದ್ದಿದ್ದವು. ಒಳಗಿನ ಅಗ್ಗಿಷ್ಟಿಗೆ ಉರಿದುರಿದು ಆರುತ್ತ ಬಂದಿತ್ತು. ಮಂಜಿನ ಸೊಗಡು ಅಡಗಿ ದಾರಿ ಸ್ಪಷ್ಟವಾಗಿ ಕಾಣುತ್ತಿತ್ತು. ಅಲ್ಲಲ್ಲಿ ಹರಕು ಹರಕಾಗಿ ಬಿಸಿಲು ಬಿದ್ದಿತ್ತು; ಹೊಟ್ಟೆ ತುಂಬಿದವರಿಗೆ ಎಲ್ಲವೂ ಹೊಸ ಸೃಷ್ಟಿಯಂತೆ ಕಾಣುತ್ತಿತ್ತು. ಆದರೆ ಮೇರಿ ಜಾನರಿಗೆ ಮಾತ್ರ ಎಲ್ಲವೂ ಅದೇ; ಅದೇ ಸೃಷ್ಟಿ– ಅದೇ ದೃಷ್ಟಿ!

ಜಾನನು ಚಟ್ಟನೆ ಎದ್ದ. ಏನು ನೆನಪಾಯಿತೋ ಬಲ್ಲವರಾರು ? ಕಂಬಳಿ ಕೊಡವಿದ. ಕೈಯಲ್ಲಿ ನಾಲ್ಕು ಅರಿವಿಗಳನ್ನು ತಕ್ಕೊಂಡ. “ ಮೇರೀ, ಇನ್ನೊಂದು ತಾಸಿಗೆ ರೊಟ್ಟೀ ತರುತ್ತೇನೆ. ಇಂದು ಹೊಟ್ಟೆ ತುಂಬಾ ತಿನ್ನುವಾ ’’ ಮೇರಿಯ ಮೋರೆಯ ಮೇಲೆ ನಗೆಯ ಮಿಂಚು ಹೊಳೆದು ಮತ್ತೆ ಚಿಂತೆ ಆವರಿಸಿತು.

ಜಾನನು ನಡದೇ ನಡೆದ. ನೇಯುಕಾರ ಓಣಿ ದಾಟಿತು. ಕಟ್ಟೆಯ ಮೇಲೆ ಕುಳಿತ ಜನರನ್ನು ನೋಡಿ ಅವರೂ ತನ್ನಂತೆಯೇ ಕಷ್ಟಬಡುತ್ತಿರಬಹುದೇ ? ಎಂದು ಭಾವಿಸಿದ. ಎಷ್ಟೋ ಜನರು ತಮ್ಮ ಅರಿವೆ ಬಿಟ್ಟು ಇಂಡಿಯದ ಅರಿವೆ ಮಾರಿ ಹೊಟ್ಟೆ ತುಂಬಿಕೊಳ್ಳುತ್ತಿದ್ದಾರೆಂದು ಕೇಳಿದ್ದ. ಮುಂದಿನ ಓಣಿಗೆ ಹೋದ. ಪ್ರತಿಯೊಂದು ಮನೆಯಲ್ಲಿಯೂ ಕೂಗಿದ. ಕೆಲವರು ಉತ್ತರಕೊಟ್ಟು ತಮಗೆ ಅರಿವೆ ಬೇಡೆಂದು ಹೇಳಿದರು. ಕೆಲವರು ಇವನ ಕಾಟ ಸಾಕೆಂದು ಉತ್ತರ ಕೊಡದೆ ಮೋರೆ ತಿರುವಿಕೊಂಡು ಕುಳಿತರು. ಜಾನನು ಹಾಗೇ ನಡೆದಿದ್ದ. ಕುದುರೆ ಗಾಡಿಯಲ್ಲಿ ಸಿರಿವಂತರು ಇಂಡಿಯದ ಭಾರೀ ಬೆಲೆಯ ಅರಿವೆ ಹಾಕಿಕೊಂಡು ನಡೆದಿದ್ದರು. ಜಾನನ ಹೊಟ್ಟೆಯಲ್ಲಿ ಕಸವಿಸಿ. ಈಸಲ ಎಲ್ಲಿಯೂ ನೋಡಲಿಲ್ಲ. ಓಣಿಯ ಒಂದುಕಡೆಯ ಮನೆಗೆ ಹೋದ. ಮನೆಯ ಮುಂದೆ ಕೂಗಿದ. ನಾಲ್ಕುಬಾರಿ ಕೂಗಿದ. ಯಾರೂ ಉತ್ತರ ಕೊಡಲಿಲ್ಲ. ಒಳಗೆ ಹೊಕ್ಕ. ಎದುರಿಗಿನ ಟೇಬಲ್ಲ ಮೇಲೆ ಅರಿವೆ ಇಟ್ಟ. ಮನೆಯ ಸಿರಿವಂತಿಕೆ ನೋಡಿ ಜಾನನ ಕಣ್ಣು

ತಣಿದಿರಬಹುದು. ಆದರೆ ಹೊಟ್ಟೆ ತಣಿದಿದ್ದಿಲ್ಲ. ಎಡಬಲಕ್ಕೆ ನೋಡಿದ. ಯಾರೂ ಇದ್ದಿಲ್ಲ. ಅಡಿಗೇ ಮನೆಗೆ ಹೋದ. ಎದುರಿಗೆ ರೊಟ್ಟೆಯು ರಾಸಿ ರಾಸಿಯಾಗಿ ಬಿದ್ದಿತ್ತು. ನೋಡಿ ಕಣ್ಣು ಅರಳಿದವು. ಕೈಗಳು ರೊಟ್ಟೀ ತಕ್ಕೊಳ್ಳಲಿಕ್ಕೆಂದು ಮುಂದೆ ಚಾಚಿದವು. ಹಿತ್ತಲಲ್ಲಿ ಏನೋ ಸದ್ದಾಗುತ್ತಿತ್ತು. ಅಲ್ಲಿ ನಾಯಿಯ ಮುಂದೆ ನಾಲ್ಕಾರು ರೊಟ್ಟೆಗಳು ಬಿದ್ದಿದ್ದವು. ಅದು ತಿಂದುಳಿದ ನಾಲ್ಕೆಂಟು ರೊಟ್ಟೆಯ ತುಣುಕುಗಳು ಸುತ್ತಲೂ ಬಿದ್ದಿದ್ದವು- ಇರಿವೆಗಳು ಸಾಲುಗಟ್ಟಿ ಅವುಗಳ ಸಣ್ಣ ಸಣ್ಣ ತುಣುಕುಗಳನ್ನು ಒಯ್ಯುವದು ಜಾನನ ಕಣ್ಣಿಗೆ ಬೀಳದೆ ಹೋಗಲಿಲ್ಲ. ನಾಯಿಯ ಭಾಗ್ಯವನ್ನು ನೋಡಿ ಜಾನನಿಗೂ ಕ್ಷಣಕಾಲ ಅಸೂಯೆ ಬಂದಿರಬೇಕು.

ಒಲೆ ಉರಿಯುತ್ತಿತ್ತು. ಒಲೆಯ ಮುಂದೆ ರೊಟ್ಟೆಯ ರಾಸಿ ಬಿದ್ದಿತ್ತು. ಕಣ್ಣು ಅರಳಿದವು. ಕೈಗಳು ರೊಟ್ಟೆ ತಕ್ಕೊಳ್ಳಲಿಕ್ಕೆ ಮುಂದೆ ಚಾಚಿದವು. ಇಂದು ಹೊಟ್ಟೆತುಂಬಾ ರೊಟ್ಟೆ ಸಿಕ್ಕಿತಲ್ಲಾ, ಎಂದು ಮನವು ಎಷ್ಟು ಉಲ್ಹಾಸಗೊಂಡಿರಬಹುದು! ರೊಟ್ಟೀ ತಂದದ್ದನ್ನು ನೋಡಿ ಮೇರಿಯು ಆನಂದದಿಂದ ಅಪ್ಪಿಕೊಳ್ಳಬಹುದಲ್ಲವೇ ಎಂದು ಅವ ಮನಸ್ಸಿನಲ್ಲಿಯೇ ಮಂಡಿಗೆ ಮಾಡುತ್ತಿದ್ದ. ಆ ಉತ್ಸಾಹದಲ್ಲಿ ತಾನೇನು ಕೆಲಸ ಮಾಡುತ್ತಿದ್ದೇನೆಂದು ಅವ ಮರತಿರಬೇಕು. ಒಂದು ವೇಳೆ ಗೊತ್ತಿದ್ದರೂ ತಾನು ತಂದ ಅರಿವೇ ಬೆಲೆಯಲ್ಲಿ ರೊಟ್ಟೆ ಒಯ್ಯುತ್ತೇನೆಂದೂ, ಅದರಿಂದ ತನಗೆ ದೋಷತಟ್ಟದೆಂದೂ ಅವ ಭಾವಿಸಿರಬೇಕು.

ಅವ ಎಣಿಸಿ ಅಂದಿನವುಟ್ಟಿಗೆ ನಾಲ್ಕು ರೊಟ್ಟೀ ತಕ್ಕೊಂಡ. ಅಡಿಗೇಮನೆ ಬಿಟ್ಟುಬಂದ. ಗಡಿಬಿಡಿಯಿಂದ ಹೊರಟು ಹೆಬ್ಬಾಗಿಲಿಗೆ ಬಂದ.

ಹಿಂದಿನಿಂದ ಯಾರೋ ಎರಡೂ ಕೈ ಗಟ್ಟಿಯಾಗಿ ಹಿಡಿದರು. ಕಾಲನಿಂದೊಮ್ಮೆ ಒದ್ದರು. ಹಸಿವೆಯಿಂದ ಕಂಗಾಲಾದ ಜಾನನು ಮೂರ್ಛೆ ಬಂದು ಬಿದ್ದ. ಕೈಯರೊಟ್ಟೆ ಬಾಯಿಗೆ ಹೋಗುವ ಮೊದಲು ಮೂರ್ಛೆಯಲ್ಲಿ ಕೆಳಕ್ಕೆ ಬಿದ್ದು ಬಿಟ್ಟಿತು. ಮನೆಯ ನಾಯಿ ಅವನ್ನು ಹಿತ್ತಲಕ್ಕೆ ಒಯ್ದಿತು.

ಬಂದವರು ಜಾನನನ್ನು ಅಲ್ಲಿಯೇ ಬಿಟ್ಟು ಹೊರಚಿಲಕ ಹಾಕಿಕೊಂಡು ಹೋದರು. ಮುಂದೆ ಐದು ನಿಮಿಷಗಳಲ್ಲಿ ಅಡಿಗೆಯವನೂ, ಮನೆಯ ಧನಿಯೂ, ಇಬ್ಬರು ಪೋಲೀಸರೂ ಬಂದರು ಅಷ್ಟರಲ್ಲಿ ಜಾನನು ಚೇತರಿಸಿಕೊಂಡು ಕುಳಿತಿದ್ದ.

ಜಾನನು ಪಕ್ಕಾ ಕಳ್ಳನಾಗಿದ್ದರೆ ಬೇಕಾದ ಹಾಗೆ ತಪ್ಪಿಸಿಕೊಳ್ಳ ಬಹುದಾಗಿತ್ತು. ತನ್ನ ಜೀವನದಲ್ಲಿ ಅವನು ಮಾಡಿದ ಕಳವೆಂದರೆ ಇದೊಂದೇ ಇರಬಹುದು.

ಜಾನನು ಧನಿಗೆ ಎರಗಿದ. ಇಂಡಿಯಾಪ ಅರಿವೆ ತಾಗಿದ ಕೂಡಲೆ ಚೇತರಿಸಿಕೊಂಡು ಎದ್ದ. ನಾಲ್ಕು ರೊಟ್ಟಿಯ ಬೆಲೆಗೆ ತಾನು ತಂದ ಎಲ್ಲಾ ಅರಿವೆ ಕೊಡುವದಾಗಿ ಹೇಳಿದ.

ಧನಿಗೆ ಕರುಣೆ ಬಂದಿರಬೇಕು. ಅವನನ್ನು ಬಿಟ್ಟುಬಿಡಬೇಕೆಂದು ತನ್ನ ಅಭಿಪ್ರಾಯವನ್ನು ಪೋಲೀಸರಿಗೆ ತಿಳಿಸಿದ.

ಆದರೆ ಪೋಲೀಸರು ಸುಮ್ಮನಿರಲಿಲ್ಲ. "ರಾಯರೇ, ಕಳ್ಳನು ಮುದ್ದೇಮಾಲು ಸಹಿತವಾಗಿ ಸಿಕ್ಕಿರಲು, ಅವನನ್ನು ಬಿಟ್ಟುಬಿಡಲಿಕ್ಕೆ ಉಪದೇಶಮಾಡುತ್ತಿದ್ದೀರಲ್ಲ! ಕಳ್ಳರನ್ನು ಹಿಡಿದು ದಂಡಿಸುವದು ನಮ್ಮ ಕರ್ತವ್ಯ. ನಿಮ್ಮ ಮಾತಿನಂತೆ ನಡೆದರೆ ನಮ್ಮ ಕರ್ತವ್ಯ ಬಿಟ್ಟಂತಾಗುವದಲ್ಲದೆ, ಸಮಾಜಸ್ವಾಸ್ಥ್ಯದ ಹಾಗು ಕಾಯಿದೆಯ ಸಂರಕ್ಷಕರಾದ ನಮ್ಮಿಂದ ನಿಮಗೆ ಉಪಯೋಗವೇನು?" ಎಂದು ನುಡಿದರು.

ಜಾನನು ಎದ್ದ. ಕೈಗೆ ಕಬ್ಬಿಣದ ಬೇಡಿ ತೊಡಿಸಿದರು. ಅವನ ಅರಿವೇಗಂಟನ್ನೂ, ನಾಲ್ಕು ರೊಟ್ಟಿಗಳನ್ನೂ ಅವನ ಹಿಂದೆಯೇ ಒಯ್ದರು. ಸಂಗಡ ಧನಿಯೂ ಅಡಿಗೆಯವನೂ ಪೋಲೀಸರ ಬೆನ್ನು ಹತ್ತಿ ಹೊರಟರು.

ನೇಕಾರ ಜಾನನನ್ನು ಹಿಡಿದರೆಂದು ಊರಲ್ಲೆಲ್ಲಾ ಸುದ್ದಿ. ಎಲ್ಲರಿಗೂ ಆಶ್ಚರ್ಯ. ಅವನ ಗುಣ ಎಲ್ಲರಿಗೂ ಗೊತ್ತು. ಬಹು ಪ್ರಾಮಾಣಿಕ. ಅವನ ಹೆಂಡತಿಗೆ ಅದೊಂದು ಕನಸೆಂದೇ ಕಲ್ಪನೆಯಾಯಿತು

ತನ್ನ ಗಂಡನು ಇಂತಹ ಕೆಲಸಕ್ಕೆ ಎಂದೂ ಹೋಗುವವನಲ್ಲೆಂದು ಆವಳಿಗೆ ಗೊತ್ತಿತ್ತು.

ಮರುದಿನ ನ್ಯಾಯಾಸ್ಥಾನಕ್ಕೆ ಅವನನ್ನು ಎಳೆತಂದರು. ಜನ ಕಿಕ್ಕಿರಿದು ಕೂಡಿತ್ತು. ನ್ಯಾಯಮೂರ್ತಿಗಳು ಆಸನದಲ್ಲಿ ಮಂಡಿಸಿದ್ದರು. ಪೋಲೀಸರ ವಕೀಲನು ಕೋರ್ಟಿಗೆ ನಡೆದ ಸಂಗತಿ ಅರುಹಿದ. ಧನಿಯು ಸಾಕ್ಷಿಯಾಯಿತು. ಅಡಗಿಯವನೂ ಹೇಳಿದ. ಜಾನನು ತಾನು ಕಳವು ಮಾಡಿದ್ದು ನಿಜವೆಂದು ಒಪ್ಪಿಕೊಂಡ· ಅಂದಮೇಲೆ ಇದರಲ್ಲಿ ಎರಡನೆಯವರು ಏನೆಂದು ಹೇಳಬೇಕು? ಧನಿಯು ಜಾನನನ್ನು ಕ್ಷಮಿಸಬೇಕೆಂದು ಬೇಡಿಕೊಂಡ. ಅದಕ್ಕೆ ಜಾನನು ತಿರಸ್ಕಾರದಿಂದ ಅತ್ತನೋಡಿ ನ್ಯಾಯಮೂರ್ತಿಗಳಿಗೆ ತನಗೆ ಯೋಗ್ಯ ಶಿಕ್ಷೆ ಕೊಡಲೇಬೇಕೆಂದು ಬಿನ್ನವಿಸಿಕೊಂಡ. ಜಾನನಿಗೆ ಕರಿನೀರಿನ ಶಿಕ್ಷೆಯು ವಿಧಿಸಲ್ಪಟ್ಟಿತು. ಎಲ್ಲರಿಗೂ ಜಾನನ ಮೇಲೆ ದಯೆ. ಎಲ್ಲರೂ ಅವನನ್ನು ಕಂಡು ಮರುಗಿದರು. ನ್ಯಾಯಮೂರ್ತಿಗಳಿಗೂ ಖೇದವಾಯಿತು. ಅವರೇನು ಮಾಡುವರು? ಕಾಯದೆಯೊಳಗೆ ಇದ್ದ ಶಿಕ್ಷೆ ಕೊಡಬೇಕಲ್ಲವೆ?

ಜಾನನಿಗೆ ಮಾತಾಡಲು ೧೦ ನಿಮಿಷ ಕೊಟ್ಟಿದ್ದರು. ಜನರೆಲ್ಲ ಉಸುರುಗರೆಯುತ್ತ ನಿಂತಿದ್ದರು. ನ್ಯಾಯಮೂರ್ತಿಗಳು ಜಾನನಿಗೆ ತಾನು ಹೇಳಬೇಕಾದದ್ದನ್ನು ಹೇಳಲು ಅಪ್ಪಣೆ ಕೊಟ್ಟರು. ಜಾನನು ಧೈರ್ಯವಾಗಿ ಸುತ್ತಲೂ ನೋಡಿದ. ಅವನ ಕಣ್ಣುಗಳು ಮಿಂಚಿನ ವೇಗದಿಂದ ಎಲ್ಲರ ಕಡೆಗೂ ತಿರುಗಿದವು. ಎಲ್ಲರೂ ಕುತೂಹಲರಾಗಿ ಅವನೇನು ಹೇಳುವನೊ ಎಂದು ಅವನನ್ನೇ ನೋಡುತ್ತಿದ್ದರು. ಸಭೆಯು ಸ್ತಬ್ಧವಾಯಿತು. ಜಾನನು ಹೇಳಿದ

"ಸಭ್ಯರೇ, ನಾನು ಕಳವು ಮಾಡಿದೆನೆಂಬುದು ನಿಮಗೆ ಗೊತ್ತು; ಆದರಂತೆ ಆದ ಶಿಕ್ಷೆಯನ್ನು ಅನುಭವಿಸಲು ನಾನು ಆನಂದದಿಂದ ಸಿದ್ಧನಿದ್ದೇನೆ; ಆದರೆ ನಾನು ಸಾಯುವ ಮೊದಲು ನಾಲ್ಕು ಮಾತು ಹೇಳಬಯಸುತ್ತೇನೆ. ನಾನು ಯಾಕೆ ಕಳವು ಮಾಡಿದೆನೆಂಬುದು ನಿಮಗೆ ಗೊತ್ತಿಲ್ಲ. ಇಂದು ನನಗೆ ಬಂದ ಸ್ಥಿತಿಯು ಇನ್ನುಮುಂದೆ ನಿಮಗೆ

ಬರಬಾರದೆಂಬುದೇ ನನ್ನ ಉದ್ದೇಶ. ಅದಕ್ಕಾಗಿಯೇ ನಾನು ಕಳವು ಮಾಡಿದ್ದು.

ಈಗ ನಿಮ್ಮ ಮೈಮೇಲೆ ಯಾವ ಅರಿವೆಗಳಿವೆ? ದೊಡ್ಡ ಅಧಿಕಾರಿಯಿಂದ ಅತಿ ಬಡವನ ವರೆಗೂ ಹಾಕಿಕೊಂಡ ನಿಮ್ಮ ಮೈಮೇಲಿನ ಅರಿವೆಗಳು ಎಲ್ಲಿಯವು? ಎಲ್ಲವೂ ಇಂಡಿಯಾದಲ್ಲಿ ತಯಾರಾದವುಗಳು. ಇಂಡಿಯಾದ ಅರಿವೆಯು ನಯವಾಗಿರಬಹುದು; ಅಗ್ಗವಾಗಿರಬಹುದು. ಅದನ್ನು ನೀವೆಲ್ಲಾ ಕೊಳ್ಳುತ್ತಾ ಇದ್ದೀರಿ; ಆದರೆ ಅದರ ಪರಿಣಾಮವನ್ನು ಇಂದು ನಾನು, ಮುಂದೆ ನೀವು ಭೋಗಿಸಬೇಕಾಗಿದೆ! ನೇಕಾರರ ಮಗ್ಗಗಳು ಮೂಲೆಗೆ ಬಿದ್ದವು ನೇಯಿಗೆಯು ಮುಳುಗ ಹತ್ತಿದೆ. ಅದರಿಂದ ದುಡಿದು ನನ್ನಂತೆ ಉಪಜೀವಿಸುತ್ತಿದ್ದ ಲಕ್ಷಾವಧಿ ನೇಕಾರರು ಇಂದು ಉಪವಾಸ ಸಾಯಹತ್ತಿದ್ದಾರೆ. ಸಾವಿನ ಸಂಕಟವನ್ನು ತಡೆಯಲಾರದೆ ನಾನು ಕಳವು ಮಾಡಿದ್ದು! ಇದೇ ನನ್ನ ತಪ್ಪು!

ಇನ್ನು ನನ್ನ ಬಲಿ ಕೊಟ್ಟಮೇಲಾದರೂ ಬೇರೆ ದೇಶದ ಅರಿವೆ ಬಿಟ್ಟು ನಮ್ಮ ಮಾತೃಭೂಮಿಯ ಅರಿವೆಯನ್ನೇ ಧರಿಸುವಿರೆಂದು ನನ್ನ ಪೂರಾ ವಿಶ್ವಾಸವಿದೆ. ಅಂದರೇನೆ ಮುಂದೆ ನೀವು ನನ್ನಂಥ ಸ್ಥಿತಿಯನ್ನು ಅನುಭವಿಸಲಿಕ್ಕಿಲ್ಲ. ನಾನು ಅಳಿದರೂ ನೀವು ಉಳಿದು, ನನ್ನ ಇಚ್ಛೆಯನ್ನು ಕೊನೆಗಾಣಿಸಿರಿ-ಉಂಡು ತಿಂದು ಸುಖವಾಗಿರ್ರಿ. ಜಯ ಆಂಗ್ಲಮಾತೆ!"

ದಣುವಿನಿಂದ ಜಾನನು ಸುಮ್ಮನಾದನು. ನಿಲ್ಲುವದಾಗಲಿಲ್ಲ. ಕಣ್ಣು ಕತ್ತಲುಗುಡಿಸಹತ್ತಿದವು. ಕುಳಿತುಬಿಟ್ಟನು.

ಹಿಂದೆ ಒಮ್ಮೆಲೆ ಸದ್ದಾಯಿತು. ಎಲ್ಲರೂ ಅತ್ತ ನೋಡಹತ್ತಿದರು. ಮೇರಿಯು ಇದೆಲ್ಲ ಸಂಗತಿಯನ್ನು ಕೇಳಿ, ಸಭೆಗೆ ಧಾವಿಸಿ ಬರುತ್ತಿದ್ದಳು. ಹಸಿವೆಯ ಬಳಲಿಕೆಯಿಂದ ನಡುದಾರಿಯಲ್ಲಿಯೇ ಮೂರ್ಛಿತಳಾಗಿ ಬಿದ್ದಳು. ನಾಲ್ಕು ಜನರು ಅವಳನ್ನೆತ್ತಿಕೊಂಡು ಸಭೆಗೆ ಬಂದರು. ಮೇರಿಯು ಚೇತರಿಸಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

ಮೇರಿಯು ಬಂದವಳೇ ಜಾನನನ್ನು ಬಿಗಿಯಾಗಿ ಅಪ್ಪಿಕೊಂಡಳು. ಇಬ್ಬರ ಕಣ್ಣುಗಳಿಂದಲೂ ದುಃಖಾಶ್ರುಗಳು ಹೊರಹೊಮ್ಮುತ್ತಿದ್ದವು. ಎಲ್ಲರ ಕಣ್ಣುಗಳು ಈ ಹೊತ್ತಿಗೆ ಹಸಿಯಾಗಿರಬೇಕು. ನ್ಯಾಯ ಮೂರ್ತಿಗಳು ತಲೆ ಚಟ್ಟೆಕ್ಕಿಕೊಂಡು ಕುಳಿತಿದ್ದರು. ಕೆಲ ಹೊತ್ತಿನ ಮೇಲೆ ಜಾನನು ಮಾತಾಡಲಿಕ್ಕೆ ಪ್ರಯತ್ನಿಸಿದಂತೆ ತೋರಿತು. ಆದರೆ ಅಕ್ಷರಗಳು ಹೊರಡಲಿಲ್ಲ; ತುಟಿಗಳು ಅಲುಗಾಡಿದವು. ಕಣ್ಣುಗಳೇ ಮಾತಾಡುತ್ತಿರುವಂತೆ ತೋರಿತು.

ಜಾನನು ಒಮ್ಮೆಲೆ ಅವಳನ್ನು ತನ್ನ ತೋಳುಗಳಿಂದ ಬಿಡಿಸಿದ ಮತ್ತು "ಮೇರೀ........" ಎಂದು ಮಾತಾಡಿಸಿದ. ಮೇರಿಯು ನಡಗುವ ದನಿಯಲ್ಲಿ "ಜಾನ"....ಎಂದು ಕಣ್ಣೀರು ಸುರಿಸಹತ್ತಿದಳು.

ಆ ಮೇಲೆ ಜಾನನು ಹೇಳಿದ.

"ಮೇರೀ, ನಾನಿನ್ನು ಹೋಗುತ್ತೇನೆ. ನೀನು ನನ್ನ ಆಸೆಯಂತೆ ಇಂಗ್ಲಂಡದ ಅರಿವೆಯ ಪ್ರಚಾರಮಾಡಿ ನನ್ನ ಉದ್ದೇಶವನ್ನು ಈಡೇರಿಸು. ಉಪವಾಸ ಸಾಯುವ ನಿನ್ನ ಬಂಧುಗಳಿಗೆ ಅನ್ನದಾತೆಯಾಗು; ಎದ್ದೇಳು."

ಮೇರಿಯು ಜಾನನನ್ನು ಬಿಡಲಿಲ್ಲ. "ಜಾನ ನಿನ್ನ ಜತೆಗೆ ನಾನೂ ಬರುವವಳು. ನೀನಿದ್ದಲ್ಲಿಯೇ ನಾನು. ನಿನ್ನನ್ನು ಬಿಟ್ಟಿರಲು ನನಗೆ ಸಾಧ್ಯವಿಲ್ಲ......" ಮೇರಿಯಿಂದ ಮುಂದೆ ಮಾತನಾಡುವದಾಗಲಿಲ್ಲ. ಅವಳು ಪುನಃ ಮೂರ್ಛಿತಳಾಗಿ ಬಿದ್ದು ಬಿಟ್ಟಳು.

× × × ×

ಜಾನನು ಹೋಗಿ ಇಂದಿಗೆ ಎಷ್ಟೊ ದಿನಗಳು ಕಳೆದವು. ಮೇರಿಯು ಇಂಗ್ಲಂಡದ ಅರಿವೆಯ ಪ್ರಚಾರಕ್ಕಾಗಿ ಒಂದೇಸವನೇ ಪ್ರಯತ್ನಿಸುತ್ತಿದ್ದಳು. ಅದೇ ತನ್ನ ಜೀವದ ಧ್ಯೇಯವನ್ನಾಗಿ ಮಾಡಿಕೊಂಡಿದ್ದಳು. ಅವಳ ದೀರ್ಘವಾದ ಪ್ರಯತ್ನವನ್ನು ಎಲ್ಲರೂ ಕೊಂಡಾಡಿದರು. ಅದರಂತೆ ಅವಳಿಗೆ ಬಹುಮಟ್ಟಿಗೆ ಯಶ ಸಿಕ್ಕಿತು. ಅವಳೊಂದು ಸಲ ಇಂಡಿಯಾಕ್ಕೆ ಬಂದಿದ್ದಳಂತೆ. ಇಂಡಿಯಾದ ಅರಿವೆ ವ್ಯಾಪಾರವನ್ನು

ನೋಡಿ ಅವಳಿಗೆ ಹೇಗೆ ಹೇಗೋ ಆಗಿ ಇಂಗ್ಲಂಡದ—ತನ್ನ ಮಾತೃ ಭೂಮಿಯ ರಕ್ಷಣೆ—ಪೋಷಣೆಗಾಗಿ ಎಷ್ಟೋ ಮಾರ್ಗಗಳನ್ನು ಹುಡುಕಿದಳೆಂದೂ ಅಂದಿನಿಂದಲೇ ಹಿಂದುಸ್ಥಾನದ ಸೂರ್ಯನು ಪಶ್ಚಿಮಕ್ಕೆ ಹೊರಟನೆಂದೂ ವಸಂತನು ಅವಳ ಬೆನ್ನು ಹತ್ತಿ ಇಂಗ್ಲಂಡಕ್ಕೆ ಹೋದನೆಂದೂ ಕೋಕಿಲೆಯೂ ಅವನ ಜತೆಗೆ ಹಾರಿಹೋಯಿತೆಂದೂ ವದಂತಿ.

ಅದೇನೋ ನಮಗೆ ಗೊತ್ತಿಲ್ಲ.

# ಟೀಪೂ

"ಕರಿ ಮರಿ ನಾಯಿ ಕುಂಯ್‌ಗುಡತಿತ್ತು
ಭಟ್ಟರ ಬಾಯಿ ವಟಗುಡತಿತ್ತು...."

ಅಂಬಿಕಾತನಯ ದತ್ತ.

ನನಗೆ ನಾಯಿಯನ್ನು ಕಂಡರೆ ಮೊದಲಿನಿಂದಲೂ ಬಹಳ ಪ್ರೀತಿ. ಅಜ್ಜಿಗೆ ನಾಯೀ ಮೇಲೆ ಪ್ರೀತಿಯಿರಲಿಲ್ಲ; ಮೈಲಿಗೆಯ ಪ್ರಾಣಿಯೆಂದು.

ಈಗೆರಡು ವರುಷಗಳ ಹಿಂದಿನ ಮಾತು; ಒಂದು ಕುನ್ನೀ ತಂದೆ. ತಾಯೀ ಹೊಟ್ಟೆಯಿಂದ ಬಂದು ಇನ್ನೂ ಹದಿನೈದು ದಿನಗಳಾಗಿದ್ದಿಲ್ಲ. ಆದೇ ಕಣ್ಣು ತೆಗೆದಿತ್ತು. ಮೈಯೆಲ್ಲಾ ಕರ್‍ರಗೆ ನೀರಲಹಣ್ಣಿನಂತೆ. ನಡುವೆ ಅಲ್ಲಲ್ಲಿ ಬಿಳಿಯ ಚಿಕ್ಕೆಗಳು. ಕಾಲು-ಬಾಲ ಬೆಳ್ಳಗೆ. ಬಹಳ ಮುದ್ದು.

ತಂದ ಕೂಡಲೆ ಅದಕ್ಕೆ ಟೀಪು ಎಂದು ಹೆಸರಿಟ್ಟೆ.

ತಂದ ನಾಲ್ಕು ದಿನ ಟೀಪು ಬಹಳ ಚಡಪಡಿಸಿತು. ಮೊದಲನೆಯ ದಿನವಂತೂ ಬಹಳ ಕುಂಯ್‌ಗುಟ್ಟಿತು. ತಾಯಿಯನ್ನಗಲಿದ ಮರಿ; ಎಷ್ಟು ಕಳವಳಪಡುತ್ತಿದೆಯೋ ಎನ್ನಿಸುವದು. ಕೈಯಲ್ಲಿ ತಕ್ಕೊಂಡಾಗ ತಾಯಿಯ ಮೊಲೆಯೆಂದು ತಿಳಿದು ಬೆರಳು ಸೀಪಬೇಕು. ಹಾಲು ಬರದಾಗಲು ಮತ್ತೆ ಕುಂಯ್‌ಗುಡತ್ತಿತ್ತು.

ಅಂದೇ ರಾತ್ರಿ ಅದರ ತಾಯಿ ನಮ್ಮ ಓಣಿಯಲ್ಲಾ ಕೂಗಿತು. ನಮ್ಮ ಮನೆಯ ಮುಗ್ಗಲಿಗೂ ಒದರಿತು. ಕೂಗು ಕೇಳಿ ಮರಿ ಕುಂಯ್‌ಗುಟ್ಟಿತು. ಮರಿಗೆ ಅದರರ್ಥ ತಿಳಿದಿರಬೇಕು. ತನ್ನ ಕಿರಿದನಿಯಲ್ಲಿ ನಾನಿಲ್ಲಿದ್ದೇನೆ ಎಂದದು ಹೇಳಿರಬೇಕು.

ಹಾಲು ಕುಡಿಸಲು ಹೋದೆ. ಕುಡಿಯಲಿಲ್ಲ. ಏನೋ ಸ್ವಲ್ಪ ಕುಡಿದಂತೆ ಮಾಡಬೇಕು. ಅದು ತನ್ನ ತಾಯಿಯ ಹಾಲಲ್ಲ-ಹೊಸ ಪದಾರ್ಥವೆಂದು ತಿಳಿದ ಕೂಡಲೆ ಬಿಟ್ಟು ಬಿಡಬೇಕು.

ಮರುದಿನ ಮುಂಜಾನೆ ಮತ್ತೆ ಅದೇ ಕೂಗು. ರಾತ್ರಿ ಕೂಗಿದ ಕೂಗು. ಟೀಪುವಿನ ತಾಯಿ ಮೋರೆ ಕೆಳಗೆ ಮಾಡಿ ಕೂಗುತ್ತಿತ್ತು. ಅರೆಮುಚ್ಚಿದ ರೆಪ್ಪೆ, ಹಸಿಯಾದ ಕಣ್ಣು ಕುಣಿಕೆ; ಮೋರೆ ಸಣ್ಣದು ಮಾಡಿತ್ತು. ನಾನು ಕರೆದೆ. ಎರಡು ಸಲ ಕರೆದೆ. ಅದು ಬರಲಿಲ್ಲ. ಬರಲಿಕ್ಕೆ ಮನಸ್ಸೂ ಇರಲಿಕ್ಕಿಲ್ಲ.

ಒಳಗೆ ಹೋಗಿ ಬಕ್ಕರಿ ತಂದೆ. ಅಜ್ಜಿ ಧಾಬಳಿ ಹಚ್ಚಿಕೊಂಡು ನೀರಿಗೆ ಹೋಗಿದ್ದರು. ಬಕ್ಕರಿ ಕೈಯಲ್ಲಿ ಹಿಡಿದು ಕರೆದೆ. ಕರೆದಾಗ ಒಂದು ಸಲ ಮೋರೆ ಮೇಲೆ ಮಾಡಿತು. ಒಂದೇ ಒಂದು ಸಲ ಬಾಲ ಅಲ್ಲಾಡಿಸಿ, ಕೃತಜ್ಞತೆ ತೋರಿಸಿತು. ಆದರೆ ಮುಂದಕ್ಕೆ ಬರಲಿಲ್ಲ. ಕೂಗುವದನ್ನು ಬಿಡಲಿಲ್ಲ.

ನನ್ನ ಮನ ಕರಗಿತು. ಕುನ್ನಿಗೆ ನಿನ್ನಿನಿಂದಲೂ ಉಪವಾಸ. ಸ್ವಲ್ಪಾದರೂ ಎದೆ ಹಾಲು ಕುಡಿಯಲಿ, ಎಂದು ಎತ್ತಿಕೊಂಡು ಬಂದೆ.

ತಾಯಿ ಕೂಗುತ್ತಿತ್ತು. ಕುನ್ನಿ ಕುಂಯ್‌ಗುಡುತ್ತಿತ್ತು. ಟೀಪುವನ್ನು ಅದರ ತಾಯಿಗೆ ತೋರಿಸಿದೆ. ತಾಯಿ ಒಮ್ಮೆಲೆ ಜಿಗಿದು ಬಂತು. ಬಾಲ ಅಲ್ಲಾಡಿಸುತ್ತ ಕುನ್ನಿಯನ್ನು ಮೂಸಿ ನೋಡಿತು. ಕಣ್ಣು ಅರಳಿಸಿ ಪ್ರೇಮದಿಂದ ಮರಿಯನ್ನು ನೋಡಿತು. ಮರಿ ಸಂತೋಷದಿಂದ ತಾಯಿಯನ್ನು ಮುದ್ದಾಡಿ ಮೊಲೆ ತಿನ್ನಹತ್ತಿತು ನಾಯಿ ಒಮ್ಮೆ ಮರಿಯನ್ನು ಮತ್ತೊಮ್ಮೆ ನನ್ನ ಕೈಯನ್ನೂ ನೆಕ್ಕ ಹತ್ತಿತು. ಅದಕ್ಕಷ್ಟು ಆನಂದ!

ನಾಲ್ಕಾರು ದಿನ ನಾಯಿ ಹೀಗೇ ಬಂದು ಕುನ್ನಿಗೆ ಹೊಟ್ಟೆತಿನಿಸ ಬೇಕು. ಮೊಲೆ ತಿನ್ನುವದಾದ ಮೇಲೆ ಅದನ್ನು ನಾನು ಒಳಗೆ ಕರೆ ದೊಯ್ಯಬೇಕು. ಕ್ರಮವಾಗಿ ಮರಿಗೆ ನನ್ನ ಸಲಿಗೆಯಾಗಹತ್ತಿತು. ನಾನು ಹೋದಾಗೆಲ್ಲ ನನ್ನ ಹಿಂದೆಯೇ ಬರುತ್ತಿತ್ತು.

ಒಂದು ದಿನ ಅಜ್ಜಿ ಮಡಿಹಚ್ಚಿಕೊಂಡು ನೀರಿಗೆ ಹೋಗಿದ್ದರು. ಒಳಗೆ ಯಾರದೋ ಸಂಗಡ ಮಾತಾಡುವ ನನ್ನ ದನಿ ಕೇಳಿ ಟೀಪು ನಾಸಿದ್ದಲ್ಲೇ ಬಂತು. ಬದಿಯಲ್ಲಿಟ್ಟಿದ್ದ ಉಪ್ಪಿನಕಾಯಿ ಭರಣಿ-ಮಡಿನೀರು ಮುಟ್ಟಿತು. ಅದೇ ಸಮಯಕ್ಕೆ ಅಜ್ಜಿಯೂ ಬಂದರು ಆ ಭ್ರಷ್ಟಾಕಾರ ನೋಡಿದರು.

ಅಜ್ಜಿಗೆ ಭಯಂಕರ ಸಿಟ್ಟು ಬಂತು. ಸ್ಪಿರಿಟಿನಲ್ಲಿ ಎದ್ದಿದ್ದ ಅರಿವೆಗೆ ಕೊಳ್ಳಿ ಕೊಟ್ಟಂತೆ ಭಗ್-ಎಂದು. ಮೈಲಿಗೆಯಾಗಿ ಕೈಯಲ್ಲಿ ಸಿಕ್ಕ ಕಲಪರಟೆಯಿಂದ ನಾಯಿಗೆ ಇಕ್ಕಿದರು. ಕಲಪರಟೆ ಒಡೆಯಿತು. ನಾಯಿ ಓಡಿತು.

ಈ ಮಾತಿಗೆ ಎರಡು ತಿಂಗಳಾಯಿತು. ಅಜ್ಜಿಯ ಮಾತು ಮೀರಿ ಟೀಪುವನ್ನು ತಂದಿಡಲಿಕ್ಕೆ ಧೈರ್ಯ ಸಾಲದು.

ಟೀಪು ಹೊಟ್ಟೆ ಹಸಿದಾಗೆಲ್ಲ ಹೊರಗೆ ಅಡ್ಡಾಡಿ ಪುನಃ ನಮ್ಮ ಕಟ್ಟೆಯ ಮೇಲೆ ಕೂಡಬೇಕು. ನನ್ನನ್ನು ಕಂಡಕೂಡಲೆ ಬಾಲ ಅಲ್ಲಾಡಿಸುತ್ತ ಗೋಣು ತಿರುಗಿಸುತ್ತ ಮೈಮೇಲೆ ಏರಬೇಕು. ಅಜ್ಜಿ ಬಂದ ಕೂಡಲೆ ದಿಕ್ಕಾಪಾಲಾಗಿ ಓಡಿ ಹೋಗಬೇಕು.

ಇಂದೇಕೋ ಟೀಪು ಹೊರಗೆ ಹೋಗಿದ್ದಿಲ್ಲ. ಅದಕ್ಕಿಂದು ಬೇಸರ ಬಂದಿರಬಹುದು. ಇಲ್ಲವೆ ಅಜ್ಜಿ ಮನೆಯಲ್ಲಿಲ್ಲದ್ದನ್ನು ತಿಳಿದು ಅವರು ಬರುವ ವರೆಗೆ ಹೊಟ್ಟೆ ಹಸಿದಿದ್ದರೂ ಇಲ್ಲಿಯೇ ನನ್ನ ಸಂಗಡ ಚಿನ್ನಾಟವಾಡಿ ಆನಂದಪಡಬೇಕೆಂದು ಅನಿಸಿರಬಹುದು. ನಾನು ಅಜ್ಜಿ ಇಲ್ಲದ್ದನ್ನು ನೋಡಿ ಒಳಗಿನಿಂದ ಒಂದು ರೊಟ್ಟಿ ತಂದು ತುಪ್ಪ ಸವರಿ ಅದರ ಮುಂದೆ ಇಟ್ಟೆ. ಅದು ರೊಟ್ಟಿಯ ಮೇಲೆ ಕಾಲಿಟ್ಟು ಜಿಗಿಜಿಗಿದು ತಿನ್ನುತ್ತಿತ್ತು. ತಿನ್ನುವಾಗ ಆನಂದದಿಂದ ನನ್ನನ್ನೇ ನೋಡುತ್ತಿತ್ತು. ನಾನೂ ಹರುಷದಿಂದ ಅದರ ಆಟವನ್ನೇ ನೋಡುತ್ತಿದ್ದೆ.

ಒಳಗೆ ಸದ್ದಾಯಿತು.

ನೋಡ ನೋಡುವಷ್ಟರಲ್ಲಿ ಅಜ್ಜಿ ಕಲ್ಲಿನಿಂದ ಟೀಪುವಿಗೆ ಒಗೆದರು ಕಲ್ಲು ಟೀಪುವಿನ ತಲೆಗೆ ಬಡೆಯಿತು. ತಲೆಯಿಂದ ರಕ್ತ ಹೊರ ಚಲ್ಲಿತು. ರೊಟ್ಟಿ ಅಲ್ಲೇ ಉಳಿಯಿತು. ಟೀಪು ಈಸಲ ಓಡಲಿಲ್ಲ. ಮೆಲ್ಲಗೆ ಒಂದೊಂದೆ ಹೆಜ್ಜೆ ಇಡುತ್ತ ಹೊರಟಿತು. ಅದಕ್ಕೆ ಮೂರ್ಛೆ ಬಂದಿರಬೇಕು. ಬಾಗಿಲಲ್ಲಿ ತಲೆ ತಿರುಗಿ ಬಿತ್ತು. ಮತ್ತೆ ಮೆಲ್ಲಗೆ ಚೇತರಿಸಿಕೊಂಡು ಹೊರಟಿತು.

ಅಜ್ಜಿ ಹಿತ್ತಲಲ್ಲಿ ದೇವರ ಸಲುವಾಗಿ ಹೂ ಕೊಯ್ಯುತ್ತಿದ್ದರು.

ಟೀಪು ಈಗ ನಮ್ಮ ಮನೆಗೆ ಬರುವದು ಬಹಳ ಅಪರೂಪ. ಯಾವಾಗಾದರೊಮ್ಮೆ ಬಂದರೂ ಹಿತ್ತಲು ಮುಂಚೆ ಸುತ್ತಾಡಿ ಅಜ್ಜಿ ಇಲ್ಲದ ಸುಳುವು ತಿಳಿದು ಬರುವದು. ನನ್ನೆಡೆಗೆ ನೋಡಿ ಮತ್ತೆ ಹೊರಟು ಹೋಗುವದು. ಇತ್ತಿತ್ತಲಾಗಿ ನಮ್ಮ ಮನೆಯ ಕಡೆಗೆ ಬರುತ್ತಿದ್ದಿಲ್ಲ. ಪರದೇಶಿಯಂತೆ ಅಲ್ಲಿಲ್ಲಿ ಅಲೆದಾಡಿ ಸಿಕ್ಕಷ್ಟು ತಿಂದು ಬರಿದಾದ ಹೊಟ್ಟೆಗೆ ಹರಿಯು ನೀರು ಹಾಕಿ ಎಲ್ಲೆಲ್ಲಿಯೋ ಕಾಲಕಳೆಯುತ್ತದೆ ಮೈಯಲ್ಲಾ ಸೊರಗಿ ಹೋಗಿದೆ. ಧೂಳವಂತೂ ಮೆತ್ತಿಬಿಟ್ಟದೆ. ತಲೆಯಲ್ಲೊಂದು ಹುಣ್ಣು. ಅದರಮೇಲೆ ನೊಣಗಳ ಕಾಟ. ಮನಸ್ಸು ಬಂದಾಗ ನೊಣ ಹೊಡಕೊಂಡು ಏನೋ ಯೋಚಿಸುವಂತೆ ಮಲಗುವದು. ಒಮ್ಮೊಮ್ಮೆ ನನ್ನನ್ನು ನೋಡಿದಾಗ ಏನೊ ಒಂದು ಭಾವಪೂರ್ಣವಾದ ನೋಟ ಬೀರುವದು.

× × × ×

ತಲೆ ಸಿಡಿಯುವಂಥ ಬೇಸಿಗೆಯ ಬಿಸಿಲು. ಮಧ್ಯಾಹ್ನದ ಆರು ತಾಸು ಮಿಕ್ಕಿತ್ತು. ಹೊರಗೆ ನೋಡಿದರೆ ಸಿಡಿಲಿನ ಬೆಂಕೆಯನ್ನು ನೋಡಿದಂತಾಗಿ ಕಣ್ಣು ಕತ್ತಲುಗುಡಿಸುತ್ತಿತ್ತು. ತಾಪವನ್ನು ತಾಳಲಾರದೆ ನಾನು ಬೀಸಣಿಕೆಯಿಂದ ಗಾಳಿ ಹಾಕಿಕೊಳ್ಳುತ್ತ ಪಡಸಾಲೆಯಲ್ಲಿ ಅಲೆದಾಡುತ್ತಿದ್ದೆ.

ಅಜ್ಜಿ ಮಲಗಿ ಎದ್ದು ಹತ್ತೀಬುಟ್ಟಿಯನ್ನು ಇಟ್ಟುಕೊಂಡು ದೇವರಿಗೆ ಬತ್ತೀ ಮಾಡುತ್ತಿದ್ದರು.

ಹೊರಗೆ ಏನೋ ಸದ್ದಾಯಿತು.

ಟೀಪು !

ಭಿಕ್ಷುಕರು ಕೂಡ ಬಿಸಿಲಿಗೆ ಹೆದರಿ ಹೊರಡದಿರುವಾಗ ಇದಾರ ಸದ್ದೆಂದು ನೋಡಲು ಟೀಪು! ಮೈಯಲ್ಲಾ ಹುಡಿ. ತಲೆಯಲ್ಲಿ ಹುಣ್ಣು ಬಹಳ ಅಗಲವಾಗಿತ್ತು. ಅದರಿಂದ ರಕ್ತ ಹೊರಚೆಲ್ಲುತ್ತಿತ್ತು. ಬಹುತರ ಅದನ್ನು ಯಾರೋ ಹೊಡೆದಿರಬೇಕು. ಹೊಡೆತವು ಹುಣ್ಣಿನ ಮೇಲೆ ಕುಳಿತಿರಬೇಕು.

ನಾನು ಹೊರಗೆ ಬಂದಾಗ ಟೀಪು ಪೂರಾ ಎಚ್ಚರದ ಸ್ಥಿತಿಯಲ್ಲಿದ್ದಿಲ್ಲ.

ದಾರಿಯಲ್ಲಿ ಹೋಗುವವರೊಬ್ಬರು, "ಹುಚ್ಚು ನಾಯಿ ಸ್ವಾಮೀ! ಯಾರೋ ವಿಷ ಹಾಕಿರಬೇಕು'' ಎಂದರು.

ಅದು ಹುಚ್ಚನಾಯಲ್ಲವೆಂಬದು ನನ್ನ ಅಂತರಾತ್ಮಕ್ಕೆ ಪೂರಾ ಮನವರಿಕೆಯಾಗಿತ್ತು. ಅದೊಂದು ಅನಾಥಜೀವ; ನಿರುಪದ್ರವ ಪ್ರಾಣಿ.

ಟೀಪುವಿನ ಅವಧಿ ಇನ್ನು ಸ್ವಲ್ಪವೇ. ತನ್ನ ಋಣ ತೀರಿಸಲು ಬಂದಂತೆ ತೋರಿತು. ತಲೆ ತಿರುಗಿಸುತ್ತ ನಮ್ಮ ಮನೆಯ ಮುಂದೆ ಬಿತ್ತು.

ನಾನು ಹಾಗೇ ನಿಂತಿದ್ದೆ. ಅಜ್ಜಿ ನಿಶ್ಚಲರಾಗಿ ಬತ್ತೀ ಮಾಡುತ್ತ ಕುಳಿತಿದ್ದರು.

# ಕಾಣಿಕೆ!

ಪರೀಕ್ಷೆಯ ಗದ್ದಲದಲ್ಲಿ ಮಾವನ ಮನೆಗೆ ಹೋಗುವದೇ ಆಗಿರಲಿಲ್ಲ. ಮೇಲಿಂದಮೇಲೆ ಹೋಗಬೇಡೆಂದು ಅಪ್ಪನ ಕಾಟ. ಆದರೂ ಮನಸ್ಸು ನಿಲ್ಲುತ್ತಿದ್ದಿಲ್ಲ; ಯಾಕಂದರೆ ಆ ಆಕರ್ಷಣಶಕ್ತಿಯ ಪ್ರಭಾವವೇ ಅಂತಹದು! ನಮ್ಮಪ್ಪನಾದರೂ ತನ್ನ ಮದುವೆಯಾದಾಗ ಮಾವನ ಮನೆಗೆ ಹೋಗುತ್ತಿದ್ದನೋ ಇಲ್ಲವೋ ಕೇಳಬೇಕೆಂದು ಮನಸ್ಸು ಬಂತು; ಆದರೆ ಧೈರ್ಯ ಸಾಲದು.

೧೦ನೇ ತಾರೀಖಿನ ಸಂಜೆಗೆ ಮಾವನ ಮನೆಗೆ ಹೋಗಬೇಕೆಂದು ನಿಶ್ಚಯಿಸಿಕೊಂಡೆ. ಆದರೊಳಗೆ ಹೋಗುವಂತಿದ್ದಿಲ್ಲ; ಯಾಕಂದರೆ ಆಗ ನಮ್ಮ ಪರೀಕ್ಷೆಯ ಕಾಲ. ಪರೀಕ್ಷೆಯೂ ಬಂದಿತು. ಒಂದು ದಿನ ಹೋಯಿತು, ಎರಡು ದಿನಗಳು ಕಳೆದವು; ಪ್ರತಿದಿನವೂ ಆ ಹತ್ತನೆಯ ತಾರೀಖು ಎಂದು ಬಂದೀತೆಂದು ದಾರಿ ನೋಡುತ್ತಿದ್ದೆ. ಸೂರ್ಯನಿಗೇನೋ ಜಾಡ್ಯವುಂಟಾಗಿರಬೇಕು. ಅಂತೆಯೇ ದಿನಗಳು ಅಷ್ಟು ದೊಡ್ಡವಾಗಿರಬೇಕೆಂದೆನಿಸಿತು. ಕಡೆಗೆ ನಮ್ಮ ಪರೀಕ್ಷೆಯೂ ಮುಗಿಯಿತು; ಹತ್ತನೆಯ ತಾರೀಖೂ ಬಂದಿತು.

ಇನ್ನೇನು ಕೇಳುವದು? ಕಣ್ಣಿ ಬಿಟ್ಟ ಹೋರಿಯಂತೆ! ಇದಕ್ಕೆಲ್ಲ ಅಪ್ಪನನ್ನು ಕೇಳುವದೆ? ನನ್ನ ಕರ್ತವ್ಯ ನಾನು ಮಾಡಿಬಿಟ್ಟಿದ್ದೇನೆ. ಪಾಸಾಗುವದೂ-ಆಗದಿರುವದೂ ದೇವರ ಕೈಯಲ್ಲಿ!

ನಾವಿರುವದು ಹೊಸಹುಬ್ಬಳ್ಳಿಯಲ್ಲಿ. ಮಾವನ ಮನೆ ಹಳೆ ಹುಬ್ಬಳ್ಳಿಯಲ್ಲಿ. ಮಾವನ ಮನೆಗೆ ಹೋಗುವಾಗ ನಾನು ಕ್ರೋಮ ಲೆದರಿ'ನ ಹೊಸ ಚಪ್ಪಲಿ ಹಾಕುತ್ತಿದ್ದೆ. ಅವನ್ನು ಕೊಂಡು ಎರಡು ವರ್ಷ; ಅಂದರೆ ನನ್ನ ಮದುವೆಯಾದ ವರ್ಷವೇ ಕೊಂಡದ್ದು. ಆದರೂ ಅವಕ್ಕೆ ನಾನು ಹೊಸವೇ ಎನ್ನುತ್ತಿದ್ದೆ! ಅವನ್ನು ತೆಗೆದು ಒರಸಿ, ಪಾಲೀಶ ಮಾಡಿ, ಕಾಲಲ್ಲಿ ಮೆಟ್ಟಿದೆ. ಕೋಟುತೊಟ್ಟು, ಕೈಯಲ್ಲಿ ಚತ್ತರಿ ಹಿಡಕೊಂಡು ಐಟಾಗಿ ಹೊರಟೆ.

ಊರು ದಾಟಿತು. ಜನರ ಸದ್ದು ಅಡಗಿತು. ಅಲ್ಲಿ ಹೋದ ಮೇಲೆ ಹೇಗೆ ಮಾತಾಡಬೇಕು? ಜನರೊಡನೆ ಹೇಗೆ ನಡೆಯಬೇಕು? ಮುಂತಾದ ಆಲೋಚನೆಗಳಲ್ಲಿ ವೇಳೆ ಹೋಯಿತು. ಹೋಗುತ್ತಿರು ವಂತೆಯೇ ನನ್ನ ವಿಚಾರಗಳೂ ಬೆಳೆಯುತ್ತ ಹೋದವು. ಅವಳ ಭೆಟ್ಟಿಯಾಗುವದೆಂಬ ಆನಂದ ಒಂದು ಕಡೆ; ಮಾವನವರೂ ಬೀಗರೂ ನನ್ನನ್ನು ನೋಡಿ ಹಿಗ್ಗುವರೆಂಬ ಆನಂದ ಮತ್ತೊಂದು ಕಡೆ; ಯಾಕಂ ದರೆ ನಾನು ಅಷ್ಟು ಸುಂದರನೇ ಇದ್ದೆ.

ಆದರೆ ಕೊಡ ಹಾಲಲ್ಲಿ ಹರಳುಪ್ಪು ಬೆರಸಿದಂತಾಯಿತು. ನಾನು ಸಹಜವಾಗಿ ಮೋರೆಯ ಮೇಲೆ ಕೈಯಾಡಿಸಿಕೊಂಡೆ. ಕ್ಷೌರವಾಗದೆ ಬಹು ದಿನಗಳಾಗಿದ್ದವು. ಆದರೂ ನಾನೆಷ್ಟು ಮುಂಜಾಗ್ರತೆಯುಳ್ಳವನು ಬಲ್ಲಿರೊ? ನನ್ನ ಹತ್ತರ ಒಂದು ರೇಝರು ಯಾವಾಗಲೂ ಇದ್ದದ್ದೇ.

ಹಾಗೇ ಹೋದೆ. ಎಷ್ಟು ದೂರ ಹೋದೆನೋ ತಿಳಿಯಲಿಲ್ಲ. ದಾರಿಯ ತಪ್ಪಿದೆನೆಂಬದು ಆಗ ಗೊತ್ತಾಯಿತು. ಬಹಳವಾಗಿ ಖೇದ ಗೊಂಡು ಪುನಃ ಮಾವನ ಮನೆಯ ದಾರೀ ಹಿಡಿದೆ.

ಗಡಿಬಿಡಿಯೆಷ್ಟು ಬಲ್ಲಿರೋ? ಆ ಗಡಿಬಿಡಿಯಲ್ಲಿ ಎದುರಿಗಿನ ಒಂದು ಕಲ್ಲು ಎಡವಿ ಮುಕ್ಕರಿಸಿ ಬಿದ್ದೆ. ನನ್ನ ಹೊಸ ಚಪ್ಪಲಿಯ ಉಂಗುಷ್ಟ ಹರಿದುಹೋಗಿ ಬಿಟ್ಟಿತು. ಮೈಯಲ್ಲಾ-ಹುಡಿಯಲ್ಲಿ ಉರುಳಿದ ಕತ್ತೆಯಂತೆ-ಹುಡಿಯಿಂದ ಮುಸುಗಿ ಬಿಟ್ಟಿತು! ನನ್ನಂಥ ಜಂಟಲ್‌ಮನ್ನನಿಗೆ ಈ ಸ್ಥಿತಿ ಎಂದೂ ಬರಬಾರದು! ಮಾಡುವದೇನು? ಸುತ್ತಲೂ ನೋಡಿದೆ. ಯಾರೂ ಇದ್ದಿಲ್ಲ. ಇದ್ದರೆ ಅವರು ನನ್ನನ್ನು ನೋಡಿ ನಗದೆ ಇರುತ್ತಿದ್ದಿಲ್ಲ. ಬೇಗನೆ ಎದ್ದು ಮೈಯನ್ನೆಲ್ಲಾ ಕೊಡ ವಿಕೊಂಡೆ; ಆದರೆ ಚಪ್ಪಲಿಯ ಗತಿಏನು? ಒಗೆದು ಬಿಡಬೇಕೆ? ಛೆ, ಛೀ, ಎಂದಿಗೂ ಆಗದು. ದುಡ್ಡೇನು ಹಾದಿಯ ಮೇಲೆ ಬಿದ್ದಿದೆಯೆ? ಹೊಲಿಸಿದರೆ ಮತ್ತೆರಡು ವರ್ಷ ಬರುತ್ತವೆ. ಅಂತೂ ವರ್ಷಕ್ಕೆ ಚಪ್ಪ ಲಿಯ ಸಲುವಾಗಿ ನಾಲ್ಕಾಣೆ ಬಿದ್ದಂತಾಯಿತೆಂದು ಅಂದುಕೊಂಡೆ. ಹಾಗಾದರೆ ಸಂಗಡ ಒಯ್ಯಲಾ? ಮಾವನ ಮನೆಯಲ್ಲಿ ನೋಡಿದರೆ

ಏನೆಂದಾರು? ಜೀನನೆನಲಿಕ್ಕಿಲ್ಲವೆ? ಒಂದು ಗಿಡದ ಬುಡದಲ್ಲಿಡಲಾ? ಯಾರಾದರೂ ಎತ್ತಿ ಹಾಕಿದರೆ ಹೇಗೆ? ಮನಸ್ಸಿನಲ್ಲಿ ಭಿನ್ನ ಭಿನ್ನ ವಿಚಾರಗಳ ಕೋಲಾಹಲವೆದ್ದು ಅದೊಂದು ಕುರುಕ್ಷೇತ್ರವೇ ಆಯಿತು. ಕೌರವ-ಪಾಂಡವರೇನೂ ಆ ಬಗೆಯ ಯುದ್ಧ ಮಾಡಿರಲಿಕ್ಕಿಲ್ಲ. ಆ ಬಗೆಯ ವಿಚಾರಗಳ ಯುದ್ಧವು ನನ್ನ ಮನಸ್ಸಿನಲ್ಲಿ ನಡೆಯಿತು. ನಾನು ಎಷ್ಟೋ ಹೊತ್ತಿನ ವರೆಗೆ ಹಾಗೆಯೇ ನಿಂತಮೇಲೆ, ಕಡೆಗೆ ಅವನ್ನು ಒಂದು ಕಾಗದದಲ್ಲಿ ಸುತ್ತಿ ಕೊಡೆಯಲ್ಲಿ ಅಡಗಿಸಿಟ್ಟುಕೊಂಡು ಹೊರಟೆ.

ಮಾವನ ಮನೆ ಸಮೀಪಿಸಿತು. ಮಾವನವರು ಬಾಗಿಲಲ್ಲೇ ನಿಂತಿದ್ದರು. ಅಲ್ಲೇನೋ ಬಳೆಗಳ ಸಪ್ಪಳವಾದಂತಾಯಿತು. ಆವಳೇ ಇರಬಹುದೆಂದು ಬಗೆದೆ; ಆದರೆ ಆಲ್ಲಾರೂ ಇರಲಿಲ್ಲ. ಪುನಃ ಸಪ್ಪಳವಾಯಿತು. ಹೋಗಲಿ ಬಿಡು, ಎಂದು ಮಾವನವರಿಗೆ ನಮಸ್ಕರಿಸಿದೆ. ಹಿಂದಿನಿಂದ ಮತ್ತೆ ಬಳೆ ಸಪ್ಪಳವಾದಂತಾಯಿತು. ತಿರುಗಿ ನೋಡಿದೆ. ಮಾವನವರು ಏನೇನೋ ಪ್ರಶ್ನೆ ಮಾಡುತ್ತಿದ್ದರು. ನಾನು ಅತ್ತಿತ್ತ ನೋಡುವದನ್ನು ನೋಡಿ ಅವರು "ಕಿಟ್ಟೂ, ಹಿಗೇಕೆ ಮಾಡುತ್ತೀ? ಪರೀಕ್ಷೆಯಲ್ಲಿಯೂ ಹೀಗೆಯೇ ಚಂಚಲನಾಗಿದ್ದೆಯಾ?" ಎಂದರು.

ನಾನು ಬೆಚ್ಚಿ ಬಿದ್ದೆ. ಅವರು ನನ್ನ ಹೃದ್ಗತವನ್ನರಿತರೋ ಎಂದು ಬೆದರಿದೆ. ಆ ಮೇಲೆ ಧೈರ್ಯ ತಂದುಕೊಂಡು:- "ಅದೇನೂ ಇಲ್ಲ" ಎಂದೆ.

"ಪೇಪರ್ಸ ಹೇಗೆ ಇವೆ?"

"ಕ್ವೆಶ್ಚನ್ (ಪ್ರಶ್ನ ಕಾಗದ) ಪೇಪರ್ಸೋ–ಆನ್ಸರ (ಉತ್ತರ ಕಾಗದ) ಪೇಪರ್ಸೋ?"

ಮಾವನವರು ಸ್ವಲ್ಪ ನಕ್ಕು:- "ಕ್ವೆಶ್ಚನ್ (ಪ್ರಶ್ನಕಾಗದ) ಪೇಪರ್ಸು" ಅವರ ಆ ನಗುವು ನನ್ನ ಅಜ್ಞಾನವನ್ನು ತೋರಿಸಿತೆಂದು ನನಗೆ ಹಿಂದುಗಡೆ ಎನಿಸಿತು. ನಾನು "ಸ್ವಲ್ಪ ಡಿಫಿಕಲ್ಟು (ಕಠಿಣ) ಒಂದೆರಡು ಈಝಿ (ಸರಳ)"

" ಸರಿ. ಪಾಸಾಗಲು ಅಡ್ಡಿಯಿಲ್ಲವಷ್ಟೇ?"

ನಾನು "ಆಗದೇನು ?"

ನನಗೆ ಆತ್ಮವಿಶ್ವಾಸ ಬಹಳ; ಅಂದರೆ ನಾನೇನೂ ಚನ್ನಾಗಿ ಓದಿರಲಿಲ್ಲ! ಒಂದೆರಡು ಸಲ ಪಬ್ಲಿಕ್ ಲೆಕ್ಚರಿಗೆ ಹೋಗಿದ್ದೆ; ಅದರಲ್ಲೊಬ್ಬರು:—"ತರುಣರಲ್ಲಿ ಆತ್ಮವಿಶ್ವಾಸಬಲವಿರಬೇಕೆಂ"ದು ಹೇಳಿದ್ದರು ನಾನೇನು ತರುಣನಲ್ಲವೆ? ನನ್ನಲ್ಲಿ ಆತ್ಮವಿಶ್ವಾಸವು ಬೇಡವೆ? ಆ ದಿನಿಂದಲೇ ನಾನು ಆತ್ಮವಿಶ್ವಾಸದ ಮೇಲೆ ಭರವಸೆ ಇಟ್ಟಿದ್ದೆ.

ಮಾವನವರು:—"ಸರಿ. ಇನ್ನು ೮-೧೧ ದಿನಗಳಲ್ಲಿ ಏನೆಂಬದೂ ತಿಳಿಯುತ್ತದೆ" ಎಂದರು. ನನಗದು ಗೊತ್ತೇ ಇತ್ತು; ಆದರೆ ಪಾಸು –ಇಲ್ಲದಿದ್ದರೆ..................

ಮಾವನವರ ಸಂಗಡ ಮಾತಾಡುವಾಗ ಕೊಡೆಯು ಮೆಲ್ಲಗೆ ನೆಲದ ಮೇಲೆ ಬಿತ್ತು. ಚಪ್ಪಲಿ ಕೆಳಗೆ ಬಿದ್ದೇಬಿಟ್ಟವು, ನನ್ನ ಎದೆ ಬಡಿಯಲಾರಂಭಿಸಿತು !

ಮಾವನವರು:—" ಅದೇನೋ ಕಿಟ್ಟೂ?'

" ಏನೂ ಇಲ್ಲ. ದಾರಿಯಲ್ಲಿ ಮೊಳೆ ಒತ್ತುತ್ತಿದ್ದುದರಿಂದ ಸುತ್ತಿಕೊಂಡು ಬಂದೆ." ಎನ್ನುವದರೊಳಗೇ ನನಗೆ ಸಾಕುಬೇಕಾಗಿ ಹೋಯಿತು.

ಮೊದಲಿನ ತುತ್ತಿಗೇ ನೊಣ ಬಂದಂತಾಯಿತು! ಮಾವನವರು ಒಬ್ಬ ಆಳನ್ನು ಕರೆದು ಚಪ್ಪಲೆ ತೆಗೆಸಿ ಒಂದು ಮೂಲೆಯಲ್ಲಿರಿಸಿದರು.

ಒಳಗೆ ಹೋದೆ. ಯಾರೋ ಹೊಸಬರೊಬ್ಬರು ಕೈ ಕಾಲು ತೊಳಕೊಳ್ಳಲು ನೀರು ತಂದು ಇಟ್ಟರು. ನನಗೆ ಹೇಗೆ ಹೇಗೋ ಅನಿಸಿತು.

ಹೊತ್ತು ಮುಳುಗಿತು. ಹಸಿವೆಯಾಗಿದ್ದರೂ ಹೊಟ್ಟೆ ತುಂಬಿದಂತಿತ್ತು; ಇಂದು ಅವಳ ಮೋರೆ ನೋಡುವೆನೆಂಬ ಸಂತೋಷದಿಂದಲೋ, ಇದುವರೆಗಾದ ಮಂಗಳಾರತಿಯಿಂದಲೋ ನಾನು ಹೇಳಲಾರೆ.

ಹೊತ್ತು ಮುಳುಗಿತು. ಆದರೂ ಅವಳ ಸದ್ದೇ ಇಲ್ಲ. ಊಟವೂ ಇಲ್ಲ. ನಾನೊಂದು ಲೋಡಿಗೆ ಆತುಕೊಂಡು ಗಡಿಯಾರ ನೋಡುತ್ತ ಕುಳಿತುಕೊಂಡೆ. ರಾತ್ರಿ ಹತ್ತು ಹೊಡೆಯಿತು. ಸ್ವಲ್ಪ ನಿದ್ದೆ ಹತ್ತಿತು. ಎಚ್ಚರಾದಾಗ ಬಿಸಿಲೇರಿತ್ತು. ನಾನು ಇದ್ದಲ್ಲಿಯೇ ಇದ್ದೆ. ಅದೇನಾದರೂ ಚಿಕ್ಕ ಕೋಣೆಯೇನೋ ಎಂದು ನೋಡಿದೆ; ಬುಡಕ್ಕೇನಾದರೂ ಗಾದಿಯಿದೆಯೋ ಎಂದು ಕೈಯಾಡಿಸಿದೆ; ಎಡಬಲಕ್ಕೆ ಹೊರಳಿ ನೋಡಿದೆ. ಆದರೆ ಅದು ನಾನು ಸಂಜೆಯುಮುಂದೆ ಮಲಗಿದ ಪಡಸಾಲೆ; ಹಾಸಿದ್ದು ಗುಡಾರ. ನನ್ನ ಹೊರತು ಮತ್ತ್ಯಾರೂ ಇರಲಿಲ್ಲ ಯಾರೋ ಶಾಲನ್ನೊಂದು ಹೊಚ್ಚಿ ಹೋಗಿದ್ದರು.

ನನಗೆಷ್ಟು ವ್ಯಥೆಯಾಯಿತೆಂಬದರ ಕಲ್ಪನೆ ನಿಮಗೆ ಬಂದಿರಲಾರದು. ನನಗೆ ನಿದ್ದೆ ಹತ್ತಿದೆಯೆಂದು ಎಬ್ಬಿಸಿರಲಿಕ್ಕಿಲ್ಲೆಂದು ತಿಳಿದೆ. ಮೋರೆಯ ಮೇಲೆ ಕೈಯಾಡಿಸಿಕೊಂಡೆ. ಗಡ್ಡವು ಹುರುಬರಕಾಗಿ ಹತ್ತಿತು.

ಇನ್ನಾದರೂ ನನ್ನವಳು ಕಾಫಿಯನ್ನು ತರಬಹುದೆಂದು ತಿಳಿದೆ. ಕೂಡಲೆ ನನ್ನ ಕಿಸೆಯಲ್ಲಿದ್ದ ರೇಝರ ಪೆಟ್ಟಿಗೆ ತೆಗೆದು ನಿಲುವುಗನ್ನಡಿ ಕಡೆಗೆ ನಡೆದೆ. ಅಲ್ಲಿ ಯಾರೂ ಇರಲಿಲ್ಲ. ನಮ್ಮ ಮಾವನವರೆಲ್ಲಿ ನೋಡುವರೋ ಎಂಬ ಹೆದರಿಕೆ! ಯಾಕೆಂದರೆ ಅವರು ಬಹಳ ಧಾರ್ಮಿಕರು. ಬೇಕಾದರೆ ಆರ್ಥೊಡಾಕ್ಸ ಎನ್ನಿರಿ. ಅಲ್ಲಿಯೇ ಒಂದು ನೀರಿನ ತಂಬಿಗೆ ಇತ್ತು. ನಮ್ಮದೇನು ಮಕಚೌರ; ಬೇಗ ಬೇಗ ಹೆರಕೊಳ್ಳಬೇಕೆಂದು ಸುರುವು ಮಾಡಿದೆ.

ಒಪ್ಪಾರೆ ಆಯಿತು. ಮಾವನವರು ಬಂದೇ ಬಿಟ್ಟರು! ಅಯ್ಯೋ ಆಗ ನನ್ನ ಗತಿಯು ಯಾತಕ್ಕೂ ಬೇಡ! ಕಳವು ಮಾಡಿ ಜೇಲಿಗೆ ಹೋದದ್ದಕ್ಕಿಂತಲೂ ಹೆಚ್ಚಿಗೆ ಹೆದರಿಕೆಯುಂಟಾಗಿ ನಾಚಿಕೆ ಬಂತು. ಹಾಗೆಯೇ ಧೋತರ ಚುಂಗಿನಿಂದ ಮೋರೆ ಮುಚ್ಚಿಕೊಂಡೆ. ಮಾವನವರು "ಇದೇನೊ!" ಎಂದು ಗುಡುಗಿದರು. ಅವರ ಆ ಶಬ್ದದಿಂದ, ನಡುಮಧ್ಯಾಹ್ನದಲ್ಲಿ ಸಿಡಿಲು ಬಡಿದಷ್ಟು ದುಃಖವಾಯಿತು. ಕೂಡಲೆ ಅವರು ಒಬ್ಬ ಕ್ಷೌರಿಗನನ್ನು ಕರೆಸಿದರು............

ಸ್ನಾನವೂ ಆಯಿತು. ನೆವಕ್ಕೆ ಸಂಧ್ಯಾವಂದನೆ ಮಾಡಿ ಕುಳಿತೆ. ಕಾಫಿಯೂ ಬಂದಿತು; ಆದರೆ ಕಾಫಿ ತಂದವರು ನನ್ನವಳಾಗಿರಲಿಲ್ಲ. ಆ ಮೇಲೆ ಅರ್ಧ ತಾಸಿನಲ್ಲಿಯೇ ಅಲ್ಲಿಂದ ಕಾಲ್ಕಿತ್ತೆ. ಮನೆಗೆ ಹೋದ ಮೇಲೆ ಅವ್ವ ಅಂದಳು:—

"ಯಾಕೋ? ಮಾರಿ ಒಣಗೇದs"

ನಾನದಕ್ಕೆ ಉತ್ತರ ಕೊಡಲಿಲ್ಲ.

"ಮೊದಲs ಹೇಳಬಾರದಿತ್ತs? ನಿನ್ನ ಹೇಣ್ತಿ ತಮ್ಮಕ್ಕನ ಮನಿಗೆ ಹೋಗಿ ಎಂಟ ದಿವಸಾತು. ಸುಮ್ಮನ ಹೋಗಿ ಮಾರಿ ಒಣಗಿಸಿಕೊಂಡು ಬಂದ್ಯಾ?"

ಆದರೆ ನನಗಾದ ಕಷ್ಟ ಅದೊಂದರಿಂದಲೇ ಅಲ್ಲ, ಅಲ್ಲಿ ಅವಮಾನವಾದದ್ದು ಬೇರೆ; ಅದನ್ನೆಲ್ಲ ಹೇಗೆ ಹೇಳುವದು!

ನನ್ನ ಪರೀಕ್ಷೆಯ ಪರಿಣಾಮವು ತಿಳಿಯುವ ದಿನ ಬಂತು. ಅದೇ ದಿನ ಮಧ್ಯಾಹ್ನಕ್ಕೆ ನಮ್ಮ ಮಾವನವರಿಂದ ಒಬ್ಬ ಸೇವಕನು ಬಂದು, "ಧ್ಯಾವ್ರು, ರಾಯರು ಇದನ್ನ ತಮಗ ಮುಟ್ಟಿಸಾಕ ತಿಳಿಸ್ಯಾರ್ರೀ" ಎಂದು ಹೇಳಿ, ಒಂದು ಗಂಟನ್ನೂ ಪತ್ರವನ್ನೂ ಕೊಟ್ಟನು. ನಾನು ಗಂಟನ್ನೊಡೆದು ನೋಡಿದೆ. ಗಂಟಿನ ಮೇಲೆ "ಕಾಣಿಕೆ!" ಎಂದು ಬರೆದಿತ್ತು. ನಾನು ಆತುರದಿಂದ ಒಳಗೆ ನೋಡಿದೆ! ಅದರಲ್ಲೇನಿದೆ ಬಲ್ಲಿರೋ?

೧ ಜೋಡು ಹರಕ ಚಪ್ಪಲಿ! ೧ ಮುರುಕ ರೇಝರ!! ೧ ರಿಝಲ್ಟ ಶೀಟ!!!

ರಿಜಲ್ಟ ಶೀಟ ನೋಡಿದೆ. ಅದರಲ್ಲಿ ನನ್ನ ನಂಬರೂ ಹೆಸರೂ ಇರಲೇ ಇಲ್ಲ. ಛಾಪಖಾನೆಯ ಮಳೆ ಜೋಡಿಸುವವರು ದುರ್ಲಕ್ಷದಿಂದ ಮರೆತಿರಬಹುದೆಂದು ತಿಳಿದೆ! ಯಾಕಂದರೆ ನನಗೆ ಆತ್ಮವಿಶ್ವಾಸ ಬಹಳ!

ನಮ್ಮ ಮಾವನು ಕಳಿಸಿದ ಕಾಣಿಕೆಗಳು ಈಗಲೂ ನನ್ನಲ್ಲಿವೆ. ಅವುಗಳನ್ನು ನೋಡಿದಾಗೆಲ್ಲ ನನಗೆ ಹೊಟ್ಟೆ ತುಂಬ ನಗೆ ಬರುತ್ತಿದೆ.

---

# ವ್ಯಾಪಾರ

ರಾಯರೆನ್ನುವದು ಒಂದು ರೀತಿಯಿಂದ ನಿಜವೇ; ಅವರಿಗೆ ಸಿಟ್ಟು ಬಂದದ್ದೂ ಯೋಗ್ಯವೇ ಅಲ್ಲವೇ ಮತ್ತೆ? ಬೆಂಗಳೂರಿನಂತಹ ದೊಡ್ಡ ಊರಲ್ಲಿ ಬೆಳೆದ ಮಗಳನ್ನು ನಿಲ್ಲಿಸಿಕೊಂಡು ಆ ನಿಲ್ದಾಣ ದಲ್ಲಿಯಾದರೂ ಎಷ್ಟು ಹೊತ್ತಿನ ವರೆಗೆ ನಿಲ್ಲುವದು? ಅವರಿಗೆ ತಮ್ಮ ಅಳಿಯನ ಮನೆ ಗೊತ್ತಿಲ್ಲೆಂತಲ್ಲ; ಆದರೆ ತಾವು ಕಾಗದ ಬರೆದರೂ, ಮನೆಯಲ್ಲಿ ಇಷ್ಟು ಆಳುಗಳಿದ್ದರೂ ಕೂಡ ಒಬ್ಬನನ್ನಾದರೂ ನಿಲ್ದಾಣಕ್ಕೆ ಕಳಿಸಬಾರದೆಂದರೇನು! ಹುಡುಗಾಟವೇ?

ಲೀಲೆ ಯಾರನ್ನೋ ನೆಟ್ಟ ದಿಟ್ಟಿಯಿಂದ ನೋಡುತ್ತಿದ್ದಳು. ರಾಯರಿಗೆ ಅದು ಸೇರಲಿಲ್ಲ. ‘ಲೀಲಾ!’ ಎಂದರು.

ಲೀಲೆ ಕನಸಿನಿಂದ ಎಚ್ಚತ್ತವಳಂತೆ: “ಯಾಕಪ್ಪಾ?” ಎಂದಳು.

“ಏನದು?”

ಲೀಲೆ ತುಸು ಲಜ್ಜೆಯಿಂದ, “ಏನೂ ಇಲ್ಲ. ಅಲ್ಲಿ ಅವರು ಒಂದಂತೆ ಕಂಡರು. ಅವರೇ ಏನೋ ಎಂದು ನೋಡಿದೆ ಪುನಃ ನೋಡುವಷ್ಟರಲ್ಲಿ ಹೊರಟೇ ಹೋದರು.”

ರಾಯರಿಗೂ ಕೋಪ; ನಿಲ್ದಾಣಕ್ಕೆ ಬಂದವನು ತನಗೆ ಭೆಟ್ಟಿಯಾಗಬಾರದೇಕೆ? ಹಿಂದಿರುಗಿ ನೋಡಿದರು.

“ಬುದ್ಧೀ....”

“ಎಷ್ಟು ಹೊತ್ತು ಆದು?”

“ಕೊಂಚ ತಡವಾಯಿತು ಬುದ್ಧೀ”

“ಸರಿ; ನಿಮ್ಮ ಸಣ್ಣರಾಯರು ಬಂದಿದ್ದಾರೆಯೆ?”

"ಇಲ್ಲ ಬುದ್ಧಿ; ಯಾರದೋ ಸಂಗಡ ಹಾಫೀಸಿನಲ್ಲಿ ಕುಳಿತಿದ್ದಾರೆ." ಲೀಲೆಗೆ ದಿಗಿಲು. ರಾಯರು ಸಾಮಾನು ಹೊರಿಸಿಕೊಂಡು ನಡೆದರು.

‡ ‡ ‡ ‡

ರಾಯರು ಮನೆಗೆ ಬರುವ ವೇಳೆಗೆ ಮಹಡಿಯ ಮೇಲೆ ರಾಮುವಿನ ಸಂಗಡ ಯಾರೋ ಮಾತಾಡುತ್ತ ನಿಂತಿದ್ದರು. "ಇವು ಸ್ಯಾಂಪಲ್ಲು, ಅತ್ಯುತ್ತಮವಾದವು; ಬೆಲೆಯೇನೂ ತಮ್ಮಂತಹ ಸಿರಿವಂತರಿಗೆ ಬಹಳಲ್ಲ. ಹಃ! ಹಃ!! ತಮಗೇನಿದು ಅರಿಯದ ವಿಷಯವೇ!"

"ಅದೆಲ್ಲ ಸರಿ; ಈಗ ಮನೆಗೆ ಬೀಗರು ಬರುವ ವೇಳೆ, ನಾಳೆ ಬನ್ನಿ."

"ಹಾಗಾದರೆ ನಾಳೆ ಬರಲೊ? ಅಪ್ಪಣೆ ತಾನೆ?"

ವ್ಯಕ್ತಿಯು ಮಹಡಿಯನ್ನು ಇಳಿಯುತ್ತಲೆ ಎದುರಿಗೆ ರಾಯರೂ, ಲೀಲೆಯೂ ಬಂದರು.

ಲೀಲೆ ಅವಾಕ್ಕಾದಳು! ಅದು ರಾಯರ ಕಣ್ಣಿಗೆ ಬೀಳಲಿಲ್ಲ.

ರಾಯರು; 'ರಾಮೂ' ಎಂದರು.

ಬಂದ ವ್ಯಕ್ತಿ ಹಾಗೇ ಹೊರಟು ಹೋಯಿತು. ರಾಮು ಮಹಡಿಯ ಮೇಲೆ ನಿಂತಿದ್ದ. ಏನೋ ವಿಚಾರಿಸುತ್ತಿದ್ದವನು ಒಮ್ಮೆಲೆ 'ಓ' ಎಂದ.

† † † †

ರಾಮುಗೆ ಲೀಲೆಯನ್ನು ಕಂಡರೆ ಪಂಚಪ್ರಾಣ. ಚಿಕ್ಕಂದಿನಿಂದಲೂ ಕೂಡಿ ಆಡಿದವರು. ಇದ್ದರೆ ೨-೩ ವರ್ಷಗಳ ಅಂತರ ಅಷ್ಟೇ; ಮೇಲಾಗಿ ಜೊತೆಯಾಗಿ ಸಾಲೆ ಕಲಿತವರು; ಸುಶಿಕ್ಷಿತರು; ಅಂದ ಮೇಲೆ ಅವರ ಪ್ರೇಮಕ್ಕೆ ಯಾತರಿಂದ ವಿಘ್ನ ಬರಬೇಕು?

ಮಹಡಿಯ ಮೇಲಿನ ಒಂದು ಕೋಣೆಯಲ್ಲಿ ರಾಮು ದಿಂಬಿಗೆ ಒರಗಿ ಕುಳಿತಿದ್ದ. ಆದೇ ಊಟವಾಗಿತ್ತು. ರಾಮು ಇದ್ದ ಮೇಲೆ ಉಳಿದವರಾರೂ ಕೆಲಸವಿಲ್ಲದೆ ಅಲ್ಲಿಗೆ ಬರಕೂಡದು; ಆದರೂ ಒಬ್ಬ

ರಿಗೆ ಮಾತ್ರ ಅಲ್ಲಿಗೆ ಬೇಕಾದ ಹಾಗೆ ಬರಲಿಕ್ಕೆ ಅವಕಾಶ. ಅದು ರಾಮುನಿಗೂ ಗೊತ್ತು ಅವ ನೆವಕ್ಕಾಗಿ ಎದುರಿಗೆ ಪುಸ್ತಕ ಹಿಡದು ಕೊಂಡು ಕುಳಿತು ಲೀಲೆಯ ಹಾದಿಯನ್ನೇ ನೋಡುತ್ತಿದ್ದ.

ಸರಸರನೆ ಪಾವಟಿಗೆ ಏರಿದ ಸದ್ದಾಯಿತು. ರಾಮುವಿನ ಕಿವಿ ನೆಟ್ಟಗಾದವು. ಬಹುತರ ಲೀಲೆಯೇ ಇರಬಹುದೆಂದು ಅವನ ತರ್ಕ; ಕೇಳಿದರೂ ಕೇಳದವರಂತೆ ನೋಡಿದರೂ ನೋಡದವರಂತೆ ಮೊದಲಿದ್ದದ್ದಕ್ಕಿಂತ ತುಸ ಹೆಚ್ಚು ಗಂಭೀರವಾಗಿಯೇ ಓದತೊಡಗಿದ.

ಬಂದ ವ್ಯಕ್ತಿಯು ನೆಟ್ಟಗೆ ಕೋಣೆಗೆ ಬರಲಿಲ್ಲ

"ರಾಯರಿದ್ದಾರೆಯೊ?" ಎಂಬ ದನಿಯೊಂದು ಹೊರಟಿತು. ಅಪರಿಚಿತವಾದ ದನಿ. ಬರಬೇಕಾದ್ದು ಬಾರದ್ದರಿಂದ ಕಿವಿಗಳಿಗೂ ಆ ದನಿಯು ನೆಟ್ಟಗೆ ಕೇಳಲಿಲ್ಲ. ಅದಕ್ಕಂತಲೇ ಬಂದ ವ್ಯಕ್ತಿ ಪುನಃ "ರಾಯರಿದ್ದಾರೆಯೋ?'' ಎಂದು ಕೇಳಬೇಕಾಯಿತು.

ರಾಮರಾಯನು ಅನಿರ್ವಾಹವಾಗಿ ಹೊರಗೆ ಬರಲೇ ಬೇಕಾಯಿತು.

ಬಂದವರು ಉದ್ದಾದ ನಿಲುವುಗನ್ನಡಿಯ ಎದುರಿಗೆ ನಿಂತರು; ಕೂಡಲೆ ಹಿಂದಕ್ಕೆ ಸರಿದರು.

"ನಮುಸ್ಕಾರ ರಾಯರೇ, ತೊಂದರೆ ಕೊಟ್ಟದ್ದಕ್ಕೆ ಕ್ಷಮಿಸಿರಿ. ಈಗಿಂದೀಗಲೇ ನಾನು ಊರಿಗೆ ಹೊರಡಬೇಕಾಗಿರುವದರಿಂದ ಇವೆರಡು ಸ್ಯಾಂಪಲ್ಲು ಕೊಟ್ಟು ಹೋಗಬೇಕೆಂದು ಬಂದೆ; ಅಲ್ಲದೆ ನಿಮ್ಮ ಮೇಲೆ ನನ್ನ ವಿಶ್ವಾಸವೇನು ಕಡಿಮೆಯೆ?'' ಎಂದೆನ್ನುತ್ತ ಎರಡು ವಜ್ರದ ಬೆಂಡೋಲೆಗಳನ್ನು ಕೊಟ್ಟನು.

ಈ ಹೊತ್ತಿನಲ್ಲಿ ಬರಬೇಕಾದವರು ಬರದಿದ್ದರೂ, ಆಗುವಷ್ಟು ಆನಂದವಾಗದಿದ್ದರೂ, ಬಂದ ವ್ಯಾಪಾರಿಯ ಮಧುರ ನುಡಿ, ಅವನು ತೋರುವ ವಿಶ್ವಾಸ-ಆದರಗಳಿಂದ ರಾಮುವು ತುಸು ಮುಗ್ಧನಾದನು. ಆ ಮೇಲೆ ರಾಮು ಅವನಿಗೆ ಕುಳಿತುಕೊಳ್ಳಲು ಸೂಚಿಸಿದನು.

ಅವನು ಲಗುಬಗೆಯಿಂದ, "ಕ್ಷಮಿಸಿರಿ. ನನಗೆ ಅವಸರದ ಕೆಲಸ ವಿದೆ. ನಾಳೆ ಸಂಜೆಗೆ ಪುನಃ ಭೆಟ್ಟಿಯಾಗುವೆನು. ನಿಮಗೆ ಇವು ಒಪ್ಪಿಗೆಯಾದರೆ ಇಟ್ಟುಕೊಳ್ಳಿರಿ. ಇಲ್ಲದಿದ್ದರೆ ನಾಳೆ ಸಂಜೆಗೆ ತಿರುಗಿ ಕೊಡಬಹುದು."

ರಾಮೂಗೆ ತುಂಬಾ ಯೋಚನೆ. ಬೆಂಡೋಲೆಗಳೇನೋ ನೋಡಲು ಮುದ್ದು. ಬೆಲೆಯೇನೋ ಭಾರಿಯಾಗಿರಬೇಕು. ಲೀಲೆ ಎಂದಿನಿಂದಲೂ ಬೆಂಡೋಲೆ ಬೇಡುತ್ತಿದ್ದಾಳೆ. ಅವಳಿಗೂ ತೋರಿಸಿ, ಒಪ್ಪಿಗೆ ಪಡಕೊಂಡು ನಾಳೆ ಕೊಂಡರಾಯಿತು; ಎಂದಾಲೋಚಿಸಿ,

"ಬೆಲೆಯೇನಾದೀತು?" ಎಂದ.

"ಬೆಲೆಯ ವಿಚಾರವೇಕೆ? ನಿಮಗೆ ಹೊಂದಿಸಿ ಕೊಟ್ಟರಾಯಿತೋ ಇಲ್ಲೋ? ಮೊದಲು ಮನಸ್ಸಿಗೆ ಬರುತ್ತವೆಯೋ ಹೇಗೆ ನೋಡಿರಿ. ಹತ್ತು ಹೆಚ್ಚು-ಹತ್ತು ಕಡಿಮೆ. ನಿಮಗೇನೂ ಬಹಳವಲ್ಲ." ಎಂದವನೇ ಹೊರಟನು.

ರಾಮು ಬೆಂಡೋಲೆ ನೋಡುತ್ತ ಕುಳಿತವನು ಹಾಗೇ ಕುಳಿತಿದ್ದನು. ವ್ಯಕ್ತಿ ಕೆಳಗಿಳಿದು ಹೋಗುವದಕ್ಕೂ, ಲೀಲೆ ಅವನನ್ನು ನೋಡುವದಕ್ಕೂ ಗಂಟುಬಿತ್ತು. ಲೀಲೆಯ ಅಚ್ಚರಿಯು ಹೇಳಕೂಡದು.

ಲೀಲೆ ಮೆಲ್ಲಗೆ ಹೆಜ್ಜೆಯಿಕ್ಕುತ್ತ ಮಹಡಿಗೆ ಬಂದಳು. ಯಜಮಾನರ ಬೆಂಡೋಲೆಯ ನೋಟವಿನ್ನೂ ಮುಗಿದಿರಲಿಲ್ಲ ಬೆಂಡೋಲೆ ನೋಡಿ ಅವಳು ಹಿಗ್ಗಿದಳು.

ರಾಮು ಒಂದು ಬೆಂಡೋಲೆ ಎಡಗಡೆ ಮಂಚದ ಮೇಲಿಟ್ಟು ಮತ್ತೊಂದನ್ನು ಕೈಯಲ್ಲಿ ಹಿಡಕೊಂಡು ಅದರ ಮಾಟವನ್ನು ನೋಡುತ್ತಿದ್ದ. ಲೀಲೆ ಅವನಿಗೆ ಗೊತ್ತಾಗದಂತೆ ಅವನ ಹಿಂದೆ ಹೋಗಿ ಮೆಲ್ಲಗೆ ಅದನ್ನು ತೆಗೆದುಕೊಂಡು ನೋಡಹತ್ತಿದಳು. ರಾಮು ಅದನ್ನು ನೋಡುವದಾದ ಮೇಲೆ ಎರಡನ್ನೂ ಪೆಟ್ಟಿಗೆಯಲ್ಲಿ ಹಾಕಿಡಲು ಕೈ ಅತ್ತ

ನೀಡಿದ. ಅಲ್ಲಿ ಬೆಂಡೋಲೆಯೇ ಇರಲಿಲ್ಲ. ಮಗ್ಗಲಿಗೆ ತಿರುಗಿದ. ಲೀಲೆ ಮುಗುಳು ನಗೆ ನಗುತ್ತ ನಿಂತಿದ್ದಳು.

"ಮನಸ್ಸಿಗೆ ಬಂತೆ?"

"ತಮಗೆ ಒಪ್ಪಿತವಾದ್ದು ನನಗೆ ಅಮಾನ್ಯವಾಗಬಹುದೆ?"

ರಾಮು ಏನೆಂದು ಉತ್ತರ ಕೊಡಬೇಕು? ತನಗೆ ಒಪ್ಪಿತವಾಗಿಲ್ಲವೆನಬೇಕೆ?

"ಸರಿ; ಹಾಗಾದರೆ ನಾಳೆಯೇ ಖರೀದಿ!"

ಲೀಲೆಯು ತುಸು ತಡೆದು; "ಬಂದವರಾರು?" ಎಂದಳು. ರಾಮು ಹುಬ್ಬು ಗಂಟುಹಾಕಿ, 'ಅವನೊಬ್ಬ ವ್ಯಾಪಾರಿ, ಎಂದ.

× × × ×

ರಾಮು ಮಹಡಿಯ ಮೇಲೆ ಒಂದು ಖುರ್ಚಿಯಲ್ಲಿ ಕುಳಿತಿದ್ದಾನೆ. ಲೀಲೆ ಎದುರಿಗೆ ಮತ್ತೊಂದು ಖುರ್ಚಿಯ ಮೇಲೆ ಕುಳಿತಿದ್ದಾಳೆ. ಇಬ್ಬರೂ ಏನೋ ಮಾತಾಡುತ್ತಿದ್ದಾರೆ. ಇಬ್ಬರ ನಡುವೆ ಮೇಲೊಂದು ವಿದ್ಯುದ್ದೀವಿಗೆ ಉರಿಯುತ್ತಲಿದೆ. ನಡುವೆ ಟೇಬಲಿನ ಮೇಲೊಂದು ವಿದ್ಯುತ್ತಿನ ಬೀಸಣಿಕೆ ಅತ್ತಿತ್ತ ತಿರುಗುತ್ತ ಇಬ್ಬರಿಗೂ ಗಾಳಿಹಾಕುತ್ತಿದೆ.

ಹೊರಗೊಂದು ಮೋಟರು ಒಬ್ಬನನ್ನು ಇಳಿಸಿ ಹೊರಟು ಹೋಯಿತು. ಅವನು ಸರಸರ ಮಹಡಿಯನ್ನೇರಿ ಬಂದನು. "ನಮಸ್ಕಾರ ರಾಮರಾವ" ಎಂದನು.

ಬಂದವನು ಮತ್ತಾರೂ ಆಗಿರದೆ. ನಿನ್ನೆ ಬಂದ ವ್ಯಾಪಾರಿಯಾಗಿದ್ದನು.

ಲೀಲೆ ಅವನನ್ನು ನೋಡಿ-ಎರಡು ಮೂರು ಸಲ ನೋಡಿ-ಏನನ್ನೋ ಯೋಚಿಸಿ, ಕೆಳಕ್ಕೆ ಹೊರಟು ಹೋದಳು.

ಬಂದವನು ಲೀಲೆ ಹೊರಗೆ ಹೋದ ಮೇಲೆ ಧೈರ್ಯವಾಗಿ ಬಾಗಿಲವನ್ನಿಕ್ಕಿದನು. "ನೋಡಿ; ಮೋಟರಿನಲ್ಲಿ ಗಾಳಿ ಬಹಳ. ತಲೆ

ಸಿಡಿಯುತ್ತ ಇದೆ.'' ಎಂದಂದು ರಾಮುವಿನ ಮಗ್ಗುಲಿಗೆ ಬೇಕೆಂತಲೇ ನಿಲುವುಗನ್ನಡಿಯ ಎದುರಿಗೆ ಖುರ್ಚಿಯ ಮೇಲೆ ಕುಳಿತನು.

ರಾಮುವು ಕನ್ನಡಿಯಲ್ಲಿ ನೋಡಿದನು. ಏನೋ ಸಂದೇಹ. ಈಗೆರಡು ಸಲ ಅವನನ್ನು ನೋಡಿದಾಗ ಅವನು ತನ್ನ ಹಾಗೆಯೆ ಇದ್ದಾನೆಂದು ಅವನಿಗೆನಿಸಿರಲಿಲ್ಲ ಈಗ ಕನ್ನಡಿಯಲ್ಲಿ ಎರಡೂ ರೂಪುಗಳು ಅಚ್ಚಳಿಯದೆ ಒಂದೇ ಬಗೆಯಾಗಿರುವದನ್ನು ನೋಡಿ ಅವನಿಗೆ ಏನೋ ಭಯ. ಅದೇ ಎತ್ತರ-ಅದೇ ಕಣ್ಣು,-ಮೂಗು, ಬಣ್ಣ ಒಂದೇ ಬಗೆ. ಆದರೂ ಪ್ರಸಂಗವನ್ನು ನೆನೆದು ಸಾವಧಾನ ತಾಳಿದನು.

ಆದರೆ ಬಂದ ಆ ಧೂರ್ತನಿಗೆ ಇವನ ಈ ನಡವಳಿಕೆಯು ಅರ್ಥವಾಗದೆ ಇರಲಿಲ್ಲ. ಅವನು ಧೈರ್ಯ ತಾಳಿ "ಏನು ರಾಯರೇ, ಬೆಂಡೋಲೆಗಳು ಮನಸ್ಸಿಗೆ ಒಪ್ಪಿದವೇ?''

ರಾಮುವಿಗೆ ಉತ್ತರ ಕೊಡಬೇಕೆಂದರೆ ಅಷ್ಟು ಧೈರ್ಯ ಸಾಲದು. "ಬೆಲೆ?'' ಎಂದ.

«ಬೆಲೆಯೇನೂ ಬಹಳವಾಗಿಲ್ಲ. ನಾಲ್ಕೇ ಸಾವಿರ; ಅಷ್ಟೇ»

ರಾಮು ಬಾಯ ಮೇಲೆ ಕೈಯಿಕ್ಕಲು ಹೋದ. ಅದು ಅರ್ಧಕ್ಕೆ ನಿಂತಿತು.

"ನಾನೇನೋ ನೂರಾರು ರೂಪಾಯಿ ಎಂದಿದ್ದೆ. ಈಗಷ್ಟು ಹಣವಿಲ್ಲವಲ್ಲ...."

"ಹಣವಿಲ್ಲದಿದ್ದರೆ ಬಂಗಾರ ಮುತ್ತುಗಳಿದ್ದರೂ ಆ ಬೆಲೆಗೆ ತಕ್ಕೊಳ್ಳುತ್ತೇನೆ.''

ರಾಮುವು ಈಗ ನಿಜವಾಗಿಯೂ ಗಾಬರಿಯಾದನು. ಕುಳಿತಲ್ಲಿಂದ ಏಳಲು ಪ್ರಯತ್ನಿಸಿದನು.

ಬಂದವನು ಅವನಿಗಿಂತ ಮೊದಲೇ ಎದ್ದನು. ಕಿಸೆಯಿಂದ ಒಂದು ಕಿರಿಗತ್ತಿಯನ್ನು ಹೊರತೆಗೆದು, "ರಾಮರಾವ, ಮೊದಲು ಆ ಕೋಣೆಯಲ್ಲಿ ನಡೆಯಿರಿ ಸ್ವಲ್ಪಾದರೂ ಗದ್ದಲವಾದರೆ ಇಲ್ಲಿಯೇ ನಿಮ್ಮ ಅಂತವೆಂದು ತಿಳಿಯಿರಿ.''

ರಾಮುವು ಉಪಾಯಗಾಣದೆ ಕಾಲುಗಳನ್ನು ದರದರ ಎಳೆಯುತ್ತ ಕೋಣೆಗೆಹೋದ. ಅವನಿಗೆ ಬಂದವನ ದುರುದ್ದೇಶವನ್ನು ನೋಡಿ ಮುಂದೆ ದಾರಿ ತೋಚದಾಯಿತು. ಆದರೂ ಧೈರ್ಯ ತಂದುಕೊಂಡ. "ನಾನೇನೂ ಗದ್ದಲ ಮಾಡುವದಿಲ್ಲ. ನನ್ನ ಆಯುಷ್ಯದಲ್ಲಿ ಇದೇನೋ ಒಂದು ಹೊಸ ಅನುಭವ. ಅಂತೆಯೇ ಈಗ ನಾನು ಗದ್ದಲಮಾಡುವದಿಲ್ಲ. ಗುದ್ದಾಡುವುದೂ ಇಲ್ಲ.''

ಬಂದವನು ಕೋಣೆಯ ಬಾಗಿಲನ್ನು ಇಕ್ಕಿಕೊಂಡು ಕುಳಿತನು. ಆ ಮೇಲೆ, " ನಾನು ಇಂದು ಬಂದ ಉದ್ದೇಶವು ಚನ್ನಾಗಿ ಗೊತ್ತಾಗಿರಬಹುದು.''

"ಹೌದು ಗೊತ್ತಾಯಿತು."

"ನಿನ್ನೆ ತಾವು ಆ ಬೆಂಡೋಲೆಗಳನ್ನು ತಮ್ಮವರಿಗೆ ತೋರಿಸಿದಿರಲ್ಲವೆ? ಅವರಿಗೂ ಒಪ್ಪಿತವಾದವಷ್ಟೆ?''

ರಾಮುವು ಏನೂ ಉತ್ತರ ಕೊಡದೆ ಕ್ಷಣಕಾಲ ಸುಮ್ಮನೆ ಕುಳಿತನು.

" ತಾವು ಉತ್ತರ ಕೊಡದಿದ್ದರೂ ಚಿಂತೆಯಿಲ್ಲ. ನನಗೆ ಎಲ್ಲ ಗೊತ್ತಿದೆ. ತಮ್ಮನ್ನು ಈಗ ೫–೬ ವರ್ಷಗಳಿಂದಲೂ ಬಲ್ಲೆ; ತಾವು ದೊಡ್ಡ ಸಿರಿವಂತರಲ್ಲದೆ ತಮ್ಮ ಹಣ ಎಲ್ಲೆಲ್ಲಿದೆ ಎಂಬುದೂ ಗೊತ್ತಿದೆ. ಅವರು ಒಪ್ಪಿದ್ದಾರೆ; ನಾನು ಬಲ್ಲೆ. ಅದೋ ಆ ನಿಮ್ಮ ತಿಜೂರಿಯಲ್ಲಿ ಬಹಳ ಕಡಿಮೆಯೆಂದರೆ ೫೦೦೦ ರೂಪಾಯಿಗಳ ದಾಗೀನು ಅವೆ. ಅಲ್ಲವೆ? ಹ....ನನಗೆ ಬಹಳ ಹೊತ್ತು ನಿಲ್ಲುವ ಅವಕಾಶವಿಲ್ಲ. ಆ ಬೆಂಡೋಲೆಗಳೆಲ್ಲಿ?"

"ಇದೆಲ್ಲ ನಿಮಗೆ ಹೇಗೆ ಗೊತ್ತಾಯಿತು?''

"ಗೊತ್ತಾಗದೇನು? ಅದು ನನ್ನ ಉದ್ಯೋಗವೇ ಆಗಿದೆ'' ಎನ್ನುತ್ತ ಒಂದು ಕಪಾಟನೊಳಗಿಂದ ಬೆಂಡೋಲೆಯ ಪೆಟ್ಟಿಗೆ ತೆಗೆದನು.

ರಾಮುವು ಗೊಂಬೆಯ ಹಾಗೆ ಎಲ್ಲವನ್ನೂ ನೋಡುತ್ತಲೇ ಇದ್ದನು.

'ರಾಮರಾವ' ಎಂದವನೇ ಅವನ ಮೂಗಿಗೆ ಕ್ಲೋರೋಫಾರ್ಮಿನ ಹೂವನ್ನು ಹಿಡಿದನು. ಕ್ಷಣದಲ್ಲಿ ಅವನ ಸ್ಮೃತಿತಪ್ಪಿ ಬಿದ್ದನು.

+ + + +

"ಯಾರು ? ಲೀಲಿ? ಮತ್ತೇಕೆ ಬಂದೆ ಮೇಲೆ? ಎರಡನೆಯ ಗಂಡಸರು ಇನ್ನೂ ಇರುವಾಗಲೇ ಬರುವದೇ?"

"ಬೆಂಡೋಲೆ ತಕ್ಕೊಂಡಿರೋ ಹೇಗೆಂದು ನೋಡಲು ಬಂದೆ.''

"ಅದಕ್ಕಾಗಲೇ ನಾನು ನಿನ್ನೆಡೆ ಹೊರಟುಬಂದದ್ದು. ರೂಪಾಯಿ ಸ್ವಲ್ಪ ಕಡಿಮೆ ಬಿದ್ದಿವೆ. ನಿನ್ನ ಬೀಗದ ಕೈ ಕೊಂಚ ತಾ ಅಂತ.''

ಲೀಲೆಯು ಅವನನ್ನು ನೋಡಿದಳು. ಅವಳ ಮುಖದಲ್ಲಾದ ಆ ವಿಲಕ್ಷಣ ಬದಲನ್ನು ಅವನು ನಸುನಗುತ್ತಲಲ್ಲಿ ನೋಡಲಸಮರ್ಥನಾದನೊ ಏನೊ?

ಅವಳ ಅನುಮಾನ ಧೃಢವಾಯಿತು '' ಸರಿ. ಈಗ ಕೆಳಗೆ ಹೋಗಿ ತರುತ್ತೇನೆ.'' ಎಂದವಳೇ ಮೆಲ್ಲನೆ ತಾನು ಬಂದ ದಾರಿಯಿಂದ ಹೊರಟು ಹೋದಳು.

ಎಷ್ಟೋ ಹೊತ್ತಿನ ವರೆಗೆ ಅವಳು ಬರಲೇ ಇಲ್ಲ. ಅವನಿಗೇನೋ ಬಲವಾದ ಸಂಶಯ. ''ಲೀಲೀ, ಲೀಲೀ'' ಎಂದು ಎರಡು ಬಾರಿ ಕೂಗಿದ.

'' ಈಗ ಬಂದೆ. ಇಲ್ಲಿಯೇ ಇದೆ ಸಿಗಲೊಲ್ಲದು.''

ಅವನು ಇನ್ನೂ ಒಂದು ಕ್ಷಣ ತಡೆದ.

+ + + +

ಎದುರಿಗೆ ಒಂದು ಮೋಟರು ಬಂದು ನಿಂತಿತು.

ಅವನು ಕೂಡಲೆ ಗೋಡೆ ಜಿಗಿದ. ಜೇಲಿ ಜಿಗಿಯಬೇಕೆನ್ನುವಷ್ಟರಲ್ಲಿ ಎದುರಿನಿಂದ ಒಂದು ಗುಂಡು ಬಂದು ಅವನ ಎದೆಗೆ ನಾಟಿತು.

+ + + +

ಅವನನ್ನು ಹೊತ್ತುಕೊಂಡು ಟಟ್ಟೆಕ್ಕೆ ತಂದಾಗ ಎಲ್ಲರಿಗೂ ಆಶ್ಚರ್ಯ. ಗುಂಡು ಬಡಿಸಿಕೊಂಡವನಿಗೂ, ಕ್ಲೋರೋಫಾರ್ಮ

ನಿಂದ ಅದೇ ಎಚ್ಚತ್ತಿವನಿಗೂ ಏನೂ ಅಂತರವಿಲ್ಲ. ಅಲ್ಲದೆ ಕ್ಲೋರೋಫಾರ್ಮಿನಿಂದ ಮಲಗಿದವನೇ ವ್ಯಾಪಾರಿ; ಗುಂಡು ಬಡಿಸಿಕೊಂಡವನೇ ರಾಮು ಎಂದು ಬೇಕಾದವರು ಹೇಳಬಹುದಿತ್ತು; ಆದರೆ ಲೀಲೆಯು ವಿಶ್ವಸನೀಯವಾದ ಮಾತಿನ ಮೇಲಿಂದಲೂ, ಅದೇ ಚೇತರಿಸಿಕೊಂಡು ಏಳುತ್ತಿರುವ ರಾಮುವಿನ ಮಾತಿನಿಂದಲೂ ಅವನ ಮಾವನಿಗೂ ಕೂಡ ಉಂಟಾದ ಅನುಮಾನವು ದೂರಾಯಿತು.

× × × ×

"ಏನು ವ್ಯಾಪಾರಿಗಳೇ, ವ್ಯಾಪಾರವಾಗಲಿಲ್ಲವೆ? "

"ನೀವು ಬಂದ ಮೇಲೆ ಹೇಗಾಗಬೇಕು?"

"ಹೌದು ನಿಮ್ಮ ವ್ಯಾಪಾರ ಗೊತ್ತುಹಚ್ಚುವದಕ್ಕೆ ಈಗೆರಡು ವರ್ಷಗಳಿಂದಲೂ ನಿಮ್ಮ ಬೆನ್ನು ಹಿಂದೆಯೇ ಇದ್ದೇವೆ"

'ಇನ್ನೂ ಇರಬಹುದಿತ್ತು; ಆದರೆ ಈ ಬೆಂಡೋಲೆಯು ವ್ಯಾಪಾರ ಕೆಡಿಸಿತು."

ಬೆಂಡೋಲೆ ನೋಡಿ ಎಲ್ಲರ ಕಣ್ಣು ಕುಕ್ಕಿದವು.

"ಸರಿ. ನಡೆಯಿರಿ. ಇಂದಿನಿಂದ ನಿಮ್ಮ ವ್ಯಾಪಾರಕ್ಕೆ ತಡೆ." ಎಂದೆನ್ನುತ್ತ ಅವನನ್ನು ಮೋಟಾರಿನಲ್ಲಿ ಹಾಕಿಕೊಂಡು ನಡೆದರು.

× × × ×

"ಅಂತೂ ಬೆಂಡೋಲೆ ವ್ಯಾಪಾರ ಸರಿಯಾಗಿತ್ತು!" ಲೀಲೆಯೆಂದಳು.

ರಾಮುವು ತಲೆ ತಗ್ಗಿಸಿದ!

---

# ನಾನಿ

"ಅಣ್ಣಾ — ಅಣ್ಣಾ..........."

"......................"

"ಅತಿಗೀ, ಅಣ್ಣೆಲ್ಲಿದಾನ"

"ನಾನೀ..........'' ಅತ್ತಿಗೆಗೆ ಮುಂದೆ ಮಾತಾಡುವದಾಗಲಿಲ್ಲ. ನಾನಿಯನ್ನು ಎದೆಗಪ್ಪಿಕೊಂಡು—ದೊಡ್ಡ ಮಳೆ ಬಿದ್ದಂತೆ ಕಣ್ಣೀರು ಸುರಿಸಹತ್ತಿದಳು.

"ಎಲ್ಲಿದ್ದಾನ ವೊದ್ಲ ಹೇಳs"

ಮನೆಯಲ್ಲೆಲ್ಲಾ ಮಸಣದ ಶಾಂತಿ—ಅದರಲ್ಲಿ ಅತ್ತಿಗೆಯ ಅಳುವಿನ ದನಿಯೊಂದೇ-ಮೂಲೆಯಲ್ಲಿ ಒಂದು ಮುದುಕಿ ಮೋರೆಗೆ ಸೆರಗು ಹಾಕಿಕೊಂಡು ಮುಳು ಮುಳು ಅಳುತ್ತಿದೆ—ನಾನಿಯ ಚಿಕ್ಕಪ್ಪ ಉಸುರ್ಗರೆಯುತ್ತಿದ್ದಾನೆ.

ನಾನಿಯು ಒಳಗೆ ಹೋಗಿ ನೋಡಿದ; ಅಲ್ಲಿ ಅವನಣ್ಣನಿರಲಿಲ್ಲಿ. ಅತ್ತಿತ್ತ ಹರವಿದ ಸಾಮಾನುಗಳು; ಮೂಲೆಯಲ್ಲೊಂದು ಸುತ್ತಿದ ಹಾಸಿಗೆ; ಹತ್ತಿರವೇ ಅಣ್ಣನ ಅಂಗಿ-ಟೊಪ್ಪಿಗೆ. ಬಂದವನೇ ಅತ್ತಿಗೆಯ ತೊಡೆಯ ಮೇಲೆ ಬಿದ್ದ. ಅವಳಳುವದನ್ನು ನೋಡಿ ತಾನೂ ಅಳಹತ್ತಿದ.

ನಾನಿಗೆ ಏನು ಹೇಳಬೇಕೆಂಬದು ಅತ್ತಿಗೆಗೆ ತೋಚಲೊಲ್ಲದು; ಅವಳೇಕೆ ಅಳುತ್ತಿದ್ದಾಳೆಂಬದು ನಾನಿಗೆ ಗೊತ್ತಾಗಲೊಲ್ಲದು.

"ಅತಿಗೀ, ಸುಮ್ಮನಿರವ್ವಾ. ನೀ ಅಳೋದು ನೋಡಿ ನಂಗೂ ಅಳೂ ಬರ್ತದs''

ನಾನಿ ನಾಲ್ಕು ವರ್ಷದ ಕಂದ. ಕಂದನ ನುಡಿ ಕೇಳಿ, ಸಮಾಧಾನ ಮಾಡಿಕೊಳ್ಳಬೇಕೆಂದು ಅವಳಿಗೆನಿಸುವದು. ಆದರೆ ಸಮಾಧಾನವಾಗಲೊಲ್ಲದು.

"ನಾನೀ."…. ಎಂದಳವಳು.

"ಯಾಕವ್ವಾ, ಅಣ್ಣೆಲ್ಲಿದ್ದಾನ ಹೇಳೂದಿಲ್ಲ"

ಮತ್ತೆ ಅದೇ ಮಾತು. ಕಣ್ಣಿನಿಂದ ಅವ್ಯಾಹತವಾಗಿ ನೀರು ಸುರಿಯುತ್ತಿತ್ತು.

"ಕಂದಾ, ಅವರು ನಮ್ಮನ್ನು ಬಿಟ್ಟು ಹೋದರು; ನನ್ನನ್ನು ಪರದೇಶಿ ಮಾಡಿದರು; ದಿಕ್ಕಿಲ್ಲದವಳನ್ನು ಮಾಡಿದರು.''

"ಹಾಂಗ್ಯಾಕಂತೀಯೆ. ಆತ ಎಲ್ಲಿ ಹೋಗ್ಯಾನ ನನ್ನ ಎತಿಗೋಂಬುದಿಲ್ಲ''

ಅತ್ತಿಗೆಯು ಬಿಕ್ಕುತ್ತಲೇ ಹೇಳಿದಳು. "ಅವರಿನ್ನೆಂದಿಗೂ ಬರುವ ಹಾಗಿಲ್ಲಪ್ಪಾ; ಸ್ವರ್ಗಕ್ಕೆ ಹೋದರು. ನನಗೆ ಇಲ್ಲಿಯೆ ಅನಾಥೆಯಾಗಿ ಬಾಳು ಎಂದು ಬಿಟ್ಟು ಹೋದರಪ್ಪಾ!" ಎಂದು ಪುನಃ ಗಟ್ಟಿಯಾಗಿ ಅಳಹತ್ತಿದಳು.

ನಾನಿಗೆ ಏನೂ ಗೊತ್ತಾಗಲೊಲ್ಲದು. ಅವನಿಗೆ ಎಲ್ಲವೂ ವಿಚಿತ್ರವೆನಿಸಿತು. ಸಾಯುವದೆಂದರೇನು? ಸ್ವರ್ಗಕ್ಕೆ ಹೋಗುವದೆಂದರೇನು? ಸ್ವರ್ಗದ ದಾರಿ ಗೊತ್ತಿದ್ದರೆ ಕೂಡಲೆ ಹೋಗಿ ಅಣ್ಣನನ್ನು ಅಪ್ಪಿಕೊಳ್ಳಬೇಕೆಂದೆನಿಸಿತು. ದಾರಿ ಕೇಳಬೇಕೆಂದೆನಿಸಿತು. ಅತ್ತಿಗೆಯ ಅಳುವಿನ ಮುಂದೆ ಅದು ಮರೆತು ಹೋಯಿತು. ತಾನೂ ಅಳಹತ್ತಿದ.

೨

ನಾನಿಯು ಕೂಸಿರುವಾಗಲೇ ತಂದೆ-ತಾಯಿಗಳು ತೀರಿದ್ದರು. ನಾನಿಯ ಅತ್ತಿಗೆ ಸರಸವ್ವನು ಅವನನ್ನು ಜೋಕೆ ಮಾಡಿದ್ದು. ಆಕೆಯ ಗಂಡ ನಾನಿಯ ದೊಡ್ಡಪ್ಪನ ಮಗ–ನಾನಿಯ ಸಾಕು ತಂದೆಯಂತಿದ್ದ. ಅವನ ಹೊಟ್ಟೆಯಲ್ಲಿ ಮಕ್ಕಳಿಲ್ಲದ್ದರಿಂದ ನಾನಿಯನ್ನು ಕಂಡರೆ ಪಂಚಪ್ರಾಣ

ನಾನಿಗೂ ಅವರೀರ್ವರ ಮೇಲೆ ಅನಿವಾರವಾದ ಪ್ರೇಮ. ಅವರನ್ನು ಬಿಟ್ಟು ಇರುವದೊಂದು ಅವನಿಗೆ ದೊಡ್ಡ ಕುತ್ತು.

ಈಗೆರಡು ದಿನ ಚಿಕ್ಕಪ್ಪನ ಮನೆಗೆ ಕಳಿಸಿದ್ದರು. ಅಣ್ಣನ ಬೇನೆ ಜೋರಾಗಿತ್ತು. ಹುಡುಗ ಹೆದರಬಹದೆಂದು ಅವರ ತಿಳುವಳಿಕೆ. ಸಂಗಡ ಬರುವಾಗ ಚಿಕ್ಕಪ್ಪ ನಾನಿಯನ್ನು ಕರಕೊಂಡು ಬಂದಿದ್ದ.

ಚಿಕ್ಕಪ್ಪನು ಅವನ ಅಂತ್ಯವಿಧಿಯನ್ನು ತೆರಿಸಿ, ಸರಸವ್ವನನ್ನೂ ಅವಳ ಮುದಿಕಿ ತಾಯಿಯನ್ನೂ ಮನೆಯಲ್ಲಿ ಬಿಟ್ಟು, ನಾನಿಯನ್ನು ಜುಲುಮೆಯಿಂದ ಅಲ್ಲಿಂದ ಎರಡ ಹರಿದಾರಿಯಿಂದಿದ್ದ ತನ್ನ ಊರಿಗೆ ಕರಕೊಂಡು ಹೋದ. ಏಕೆಂದರೆ ಅಲ್ಲಿಯೇ ಅವನ ಮನೆ-ಹೆಂಡತಿ-ಮಕ್ಕಳು; ಗುಮಾಸ್ತನ ಕೆಲಸ-ತಿಂಗಳಿಗೆ ಎರಡಿಪ್ಪತ್ತು ಸಂಬಳ.

೩

ನಾನಿ ಚಿಕ್ಕಪ್ಪನ ಮನೆಗೆ ಬಂದಾಗಿನಿಂದ ದಿನವೊಂದಕ್ಕೊ ಸೊರಗತೊಡಗಿದ. ಈಗ ಅಲ್ಲಿ ಅವನ ಮೊದಲಿನ ಅಣ್ಣನಿರಲಿಲ್ಲ; ಕುಕ್ಕಿಯ ಮೇಲೆ ಕುಳ್ಳಿರಿಸಿಕೊಂಡು ಮುಂಜಾನೆ ತೋಟದ ಕಡೆಗೆ ಅಡ್ಡಾಡಿ ಬರುತ್ತಿದ್ದ ಅವನಣ್ಣನಿರಲಿಲ್ಲ. ಮೆತ್ತನ್ನ ಅನ್ನ ಮಾಡಿ ಅದಕ್ಕೆ ಉಪ್ಪು-ತುಪ್ಪ ಹಚ್ಚಿ ಬೆಳದಿಂಗಳಲ್ಲಿ ಉಣ್ಣಿಸುವ ಅವನ ಅತ್ತಿಗೆ ಇರಲಿಲ್ಲ. ಅಳುವಾಗ ಎತ್ತಿಕೊಂಡು, "ಚಂದಪ್ ಚಂದಪ್ ಚಾರೀಕಾಯ್-ಬಟ್ಟಲ ತುಂಬ ಬಾರೇಕಾಯ್" ಎಂದು ರಮಿಸುವ ಅಮ್ಮನೂ ಇರಲಿಲ್ಲ.

ಎಷ್ಟೋ ಸಲ ನಾನಿ ಊರಿಗೆ ಹೋಗುತ್ತೇನೆಂದು ಹಟ ಹಿಡಿದ. ಚಿಕ್ಕಪ್ಪನೂ ಕಳಿಸಲು ಸಮ್ಮತಿಸಿದ. ಆದರೆ ಚಿಕ್ಕಮ್ಮ ಆತಂಕ ಮಾಡುವಳು. ನಾನಿಯು ಮನದಲ್ಲಿಯೇ ಬೆಂದು ಬೆಂಡಾಗುತ್ತಿದ್ದ. ಅಳುತ್ತಿದ್ದ.

ವರುಷ ಕಳೆಯಿತು. ಸರಸವ್ವನೇ ಜೀವ ನಿಲ್ಲಲಾರದೆ ಒಂದೆರಡು ಸಲ ಅಲ್ಲಿಗೆ ಹೋಗಿ ನಾನಿಯನ್ನು ಸಂತೈಸಿದಳು. ಅವನನ್ನು ತನ್ನ ಜತೆಗೆ ಕಳಿಸೆಂದು ಕೇಳಿಕೊಂಡಳು. ಕೇಳಿದ ಪ್ರತಿಯೊಂದು ಸಲವೂ ಚಿಕ್ಕಮ್ಮನು ನಾನಿಯನ್ನು ಕಳಿಸಲು ಸಮ್ಮತಿಸಳು. ಸರಸವ್ವನ ಮನ ಮರಗುತ್ತಿತ್ತು. ಅವನ ಹೊಟ್ಟೆನೆತ್ತಿ ನೆಟ್ಟಗೆ ನೋಡಿರೆಂದು

ಹೇಳಲು ಅವಳಿಗೆ ಸಂಕೋಚ. ಗಂಡ ಹೋದಂದಿನಿಂದ ಚಿಕ್ಕಪ್ಪನಾಗಲಿ–ಚಿಕ್ಕಮ್ಮನಾಗಲಿ ಅವಳನ್ನು ಮೊದಲಿನಂತೆ ಕಾಣುತ್ತಿರಲಿಲ್ಲ. ಚಿಕ್ಕಪ್ಪ ಆವರಿಗೆ ಹೊಟ್ಟೆಗೆ ಸಾಕಾಗುವಷ್ಟು ಕಾಳನ್ನಿಟ್ಟು ಉಳಿದ ಕಾಳು-ಕಡಿ ಬಂದ ಲಾವಣಿ ಹಣವನ್ನೆಲ್ಲ ತೆಕ್ಕೊಂಡು ಹೋಗುತ್ತಿದ್ದ.

ಸರಸವ್ವನು ನಾನಿಯ ಮೇಲೆ ಮಾಡುವ ಪ್ರೇಮವು ಚಿಕ್ಕಮ್ಮನಿಗೆ ಸೇರುತ್ತಿದ್ದಿಲ್ಲ. ನಾನಿಯನ್ನು ಕಳಿಸದಿರುವದಕ್ಕೆ ಅದೂ ಕಾರಣವಿರಬಹುದು; ಅಥವಾ ಮತ್ತೇನಾದರೂ ಕಾರಣವಿರಬಹುದೋ ಯಾರು ಬಲ್ಲರು? ಆದರೆ ಸರಸವ್ವನ ಮೇಲೆ ಚಿಕ್ಕಮ್ಮನ ಅಸೂಯೆ ಯೆಂಬದು ಮಾತ್ರ ನಮಗೆ ಗೊತ್ತಿದೆ. ಯಾಕಂದರೆ ತನಗೆ ನಾಲ್ಕು ಮಕ್ಕಳಿದ್ದು–ಒಂದನ್ನಾದರೂ ಅವಳು ದತ್ತಕ ತೆಗೆದುಕೊಳ್ಳಬೇಕೆಂದು ಚಿಕ್ಕಮ್ಮನ ಅಭಿಲಾಷೆ- ಸರಸವ್ವ ಆ ಮಾತು ಹಾರಿಸಿಬಿಟ್ಟಿದ್ದಳು.

೪

ನಾನಿ ಸಾಲೆಗೆ ಹೋಗಹತ್ತಿ ಎರಡು ತಿಂಗಳು. ರಠ ಈಕ ಮುಗಿಸಿದ್ದ.

ಒಂದು ದಿನ- ಮುಂಜಾನೆ ಸಾಲೆ- ಹತ್ತು ಹೊಡೆಯಿತು. ಸಾಲೆ ಬಿಟ್ಟಿತು. ನಾನಿ ಮನೆಗೆ ಬಂದ. "ಚಿಕ್ಕವ್ವಾ" ಎಂದ.

ಚಿಕ್ಕಮ್ಮ ಕಣ್ಣು ಕೆರಳಿಸುತ್ತ ಗಡಿಗೆ ಮೋರೆ ಮಾಡಿಕೊಂಡು.

" ಮೆಲ್ಲಗೆ ಮಾತಾಡಲು ಧಾಡಿಯೇ ನಿನಗೆ........"

ನಾನಿಯು ಕೂತಲ್ಲೇ ಜೀವಬಿಟ್ಟ.

"ಏನಂತೀ ಬೊಗಳು

ನಾನಿಯು ಸ್ತಬ್ಧ

" ಬೊಗಳುತ್ತೀಯೋ ಉರಿಯುವ ಕಟ್ಟಿಗೆ ತರಲೋ"

ನಾನಿಯು ಅಳಹತ್ತಿದ. ಅಳತ್ತ, 'ಹೊಟ್ಟೆ' ಎಂದ.

"ಹೊಟ್ಟೆ–ಹೊಟ್ಟೆ! ನಿನ್ನ ಹೊಟ್ಟೆಗೇನು ಹೆಗ್ಗಣ ಹತ್ತಿದೆಯೇ? ಅಲ್ಲಿ ಬಡೆದಿದ್ದೇನೆ ನೋಡು– ತಂಗಳ ಭಕ್ಕರಿ-ಪಲ್ಲೆ-ಹಾಕಿಕೊಂಡು ತಿನ್ನು."

ನಾನಿ ನಡುಗುವ ಕೈಯಿಂದ ಅವನ್ನು ತಾಟಿನಲ್ಲಿ ಬಡಿಸಿಕೊಂಡು ಚಿಕ್ಕಮ್ಮನನ್ನೇ ನೋಡುತ್ತ ಮಾಳಿಗೆಯ ಮೇಲೆ ಹೋದ. ಎದುರಿಗೆ ತಾಟು ಇಟ್ಟುಕೊಂಡು ಅಳಹತ್ತಿದ. ಸರಸಕ್ಕನ ನೆನಪಾಯಿತು; ಅಣ್ಣನ ನೆನಪಾಯಿತು; ಅಜ್ಜಿಯ ನೆನಪಾಯಿತು. ಯಾರೂ ಇಲ್ಲವಲ್ಲ ಎಂದು ಎಷ್ಟೊ ಹೊತ್ತು ಮುಳುಮುಳು ಅತ್ತ. ಸದ್ದು ಮಾಡಿದರೆ ಚಿಕ್ಕಮ್ಮನ ಹೆದರಿಕೆ!

ತಾಟಿನಲ್ಲಿ ಭಕ್ಕರಿ ಹಾಗೇ ಇತ್ತು. ಮುರಿದು ಒಂದು ತುತ್ತು ಬಾಯಲ್ಲಿಟ್ಟ. ಕುತ್ತಿಗೆಯ ಸಿರಗಳು ಉಬ್ಬಿದವು. ತುತ್ತು ಹೋಗಲಿಲ್ಲ ಕಣ್ಣು ಒರಸಿಕೊಳ್ಳಹತ್ತಿದ. ಒರಿಸಿ ತಿರುಗಿಕಣ್ತೆರೆದು ನೋಡುವಾಗ ಕಾಗಿ ಭಕ್ಕರಿ ಕಚ್ಚಿಕೊಂಡು ಕುಂಬಿಯ ಮೇಲೆ ಕುಳಿತಿತ್ತು.

ಚಿಕ್ಕಮ್ಮ ಒದರಿದಳು.

"ಎಷ್ಟು ಹೊತ್ತೋ ಆದು! ಕುರಿ ಕೋಣ ತಿನ್ನುತ್ತಿದ್ದೀಯಾ ಏನು-ನಿನ್ನ ಹಲ್ಲು ಮುರಿದಿವೆಯೋ? ಬೇಗಬಾ. ಉಳಿದವರಿಗೆ ಅನ್ನ ಬಡಿಸಲು ತಾಟು ಬೇಕಾಗಿದೆ."

ನಾನಿ ಎಚ್ಚತ್ತ. ಕೆಳಗಿಳಿದು ಬಂದ.

೫

ನಾನಿಗೆ ಚಿಕ್ಕಪ್ಪನ ಮೇಲೆ ಸಲಿಗೆಯಿರಲಿಲ್ಲ. ಚಿಕ್ಕಪ್ಪನಾದರೂ ಮನೆಗೆ ಬಂದಾಗ ನಾನಿಯ ಯೋಗಕ್ಷೇಮವನ್ನಷ್ಟು ತಕ್ಕೊಳ್ಳುತ್ತಿರಲಿಲ್ಲ ಹೀಗಾಗಿ ನಾನಿಗೆ ಮನೆಯಲ್ಲಿರುವದೇ ಬೇಸರವಾಯಿತು.

ಇಂದು ನಾನಿಯ ಆನಂದಕ್ಕೆ ಪಾರವೇ ಇಲ್ಲ. ಅವನಿಗೊಂದು ದೊಡ್ಡ ಹಬ್ಬ. ಯಾಕಂದರೆ ಅವನ ಅತ್ತಿಗೆ ಬಂದಿದ್ದಾಳೆ. ಅವಳನ್ನು ಕಂಡಕೂಡಲೆ ತೆಕ್ಕೆಬಿದ್ದ. ಚಿಕ್ಕಮ್ಮ ದುರದುರನೆ ನೋಡಿದಳು. ನಾನಿ ಮೆಲ್ಲಗೆ ಸರಿದ-ದೂರನಿಂತ.

ಸರಸವ್ವನಿಗೆ ಎಲ್ಲವೂ ಸಾಧಾರಣವಾಗಿ ತಿಳಿದಿತ್ತು.

ಮಧ್ಯಾನ್ಹ ಹನ್ನೆರಡು ಗಂಟೆ. ಸರಸವ್ವ ಬಟ್ಟೆ ಒಗೆಯಲಿಕ್ಕೆ ಊರ ಹೊರಗೆ ಕೋಟೇ ಬಾವಿಗೆ ಹೋದಳು. ನಾಸಿಯೂ ಬೆನ್ನು ಹತ್ತಿದ.

ಬಾವಿಯ ದಂಡೆಗೊಂದು ಕಟ್ಟೆ. ಅಲ್ಲಿ ಸರಸವ್ವ ನಾನಿಯನ್ನು ತೊಡೆಯಮೇಲೆ ಕೂಡಿಸಿಕೊಂಡು ಕುಳಿತಳು. ಎದೆಗವಚಿಕೊಂಡು ಮುದ್ದಾಡಿ, ಮೈಯ್ಯೆಲ್ಲಾ ಕೈಯಾಡಿದಳು ಎಲುಬಿನ ಹಂದರ. ಕಣ್ತುಂಬಾ ನೀರು ತಂದಳು. ನಾನಿ ತನಗೆ ಬರುವಷ್ಟು ಮಟ್ಟಿಗೆ ಚಿಕ್ಕಪ್ಪ ಕೊಡುವ ತೊಂದರೆ ಹೇಳಿದ

ಸರಸವ್ವ ಮಟ್ಟೆಯೊಳಗಿಂದ ಒಂದು ಗಂಟು ಹೊರ ತಗೆದಳು. ಆದರೊಳಗಿಂದ ಉಂಡಿ ಅವಲಕ್ಕಿ ನಾನಿಗೆ ಕೊಟ್ಟಳು. ನಾನಿ ಹೊಟ್ಟೆ ತುಂಬ ತಿಂದ.

ಸರಸವ್ವ ಹೇಳಿದಳು. "ಮಗೂ, ಉಪವಾಸ ಬೀಳಬೇಡ. ಉಂಡು ತಿಂದು ಗಟ್ಟಿಯಾಗು. ಯಾರು ಏನಂದರೂ ಸುಮ್ಮನಿರು."

ಸರಸವ್ವ ನಡುವಿನಿಂದ ಕೆಲವು ದುಡ್ಡು ತೆಗೆದು, 'ನಾನೀ, ಈ ಉಂಡಿ ದುಡ್ಡು ಎಲ್ಲಾ ಇಟ್ಟಿರುತ್ತೇನೆ ಹೊಟ್ಟೆ ಹಸಿದಾಗ ಬಂದು ಉಂಡೆ ತಿನ್ನು. ಆದಾದ ಮೇಲೆ ಇದರಲ್ಲಿಯ ಒಂದೊಂದೇ ದುಡ್ಡು ತಗೆದುಕೊಂಡು ಕಡಲೇ ತಿನ್ನು ತಿಳೀತಾ' ಎಂದು ಹೇಳಿ, ಬಾವಿಯ ದಂಡೆಯ ಮೇಲೆ ಕಲ್ಲುಪಡಕಿನಲ್ಲಿ ಎಲ್ಲಾ ಆಡಗಿಸಿ ಇಟ್ಟಳು. ಆಮೇಲೆ, "ಆದರೆ ನಾ ಕೊಟ್ಟದ್ದು ಚಿಕ್ಕಮ್ಮಗೆ ಹೇಬೇಡ. ಸಿಟ್ಟು ಬಂದೀತು"

೬

ಸರಸವ್ವ ಊರಿಗೆ ಹೊದ ಎಂಟು ದಿನಗಳ ಮೇಲೆ. ನಾನಿಗೆ ಒಂದು ದಿನ ಹೊಟ್ಟೆ ಹಸಿದಿರಬೇಕು. ಅಂತೆಯೇ ಅವ ನಡುವೆ ಮಾಸ್ತರಗನ್ನು ಕೇಳಿ ಬಾವಿಗೆ ಓಡಿದ. ಉಂಡಿ ಇರಲಿಲ್ಲ. ಉಂಡಿಯ ಪುಡಿ ಮಾತ್ರ ಉದುರಿತ್ತು. ರೊಕ್ಕ ಮಾತ್ರ ಇದ್ದಲ್ಲೇ ಇದ್ದವು. ಇಲಿ ಇರುವೆ ಏನಾದರೂ ತಿಂದಿರಬೇಕೆಂದು ತಿಳಿದ. ರೊಕ್ಕ ಅಲ್ಲಿಯೇ ಬಿಟ್ಟರೆ ? ಅವೂ ಹೋಗ ಬಹುದಲ್ಲವೇ ? ಎಂದು

ಬಗೆದ. ಅವನ್ನಿಡುವದೆಲ್ಲಿ? ತನ್ನ ಚಿಕ್ಕಮ್ಮನಿಗೆ ಗೊತ್ತಾಗ ಬಾರದು. ಬಹಳ ತಲೆ ಹಾಕಿ ಅಂಗೀ ನೋಡಿದ. ಕೋಟಿನ ಮೇಲಿನ ಬಿರಡಿ ಹರೆದಿತ್ತು. ಅದಕ್ಕೊಂದು ತೂತು. ಆ ತೂತಿನಿಂದ ಒಂದೊಂದೇ ದುಡ್ಡು ಬಿಟ್ಟ. ಮೊದಲಿನ ದುಡ್ಡು ಬಿದ್ದಾಗ ಸದ್ದಾಗ ಲಿಲ್ಲ. ಎರಡನೆಯ ದುಡ್ಡು ಬಿದ್ದ ಕೂಡಲೆ 'ಜಣ್' ಎಂದು ಸದ್ದಾ ಯಿತು. ಹೆದರಿ ಎಡಬಲಕ್ಕೆ ತನ್ನ ಚಿಕ್ಕಮ್ಮ ಬಂದಿದ್ದಾಳೇನೋ ಎಂದು ನೋಡಿದ. ಯಾರೂ ಇಲ್ಲವೆಂದು ತಿಳಿದ ಮೇಲೆ ಎಲ್ಲಾ ದುಡ್ಡು ಒಳಗೆ ಬಿಟ್ಟ. ಆಮೇಲೆ ಮತ್ತೆ ಹೊಟ್ಟೆಯ ನೆನಪಾಯಿತು. ಸರಸಕ್ಕ ದುಡ್ಡು ಕೊಟ್ಟು ಕಡಲೇ ತಕ್ಕೋ ಎಂದು ಹೇಳಿದ್ದು. ಒಳಗಿನ ದುಡ್ಡು ತಕ್ಕೊಳ್ಳಲು ಹೋದ; ಬಹಳ ಪೇಚಾಡಿದ. ಏನು ಮಾಡಿದರೂ ಬರಲೊಲ್ಲವು. ಒಳ್ಳೇ ಪಂಚಾಯತಿ...ಯಾರನ್ನು ಕೇಳ ಬೇಕು? ಯಾರನ್ನು ಬಿಡಬೇಕು ...... ..?

ಎರಡು ದಿನಗಳ ಮೇಲೆ ಚಿಕ್ಕಮ್ಮ ಎಲ್ಲ ಅರಿವೆ ಒಗೆಯಲಿಕ್ಕೆ ಕೂಡಿಸಿದಳು. ತಪ್ಪಿ ಅವರಲ್ಲಿ ನಾನಿಯು ಕೋಟು ಬಂತು. ನಾನಿಯ ಕಿಸೆಯಲ್ಲಿ-ಅಲ್ಲಲ್ಲ-ತೂತಿನಲ್ಲಿ ರೊಕ್ಕ. ಅವಳಿಗೆ ಹೇಳಲಾ ಗದಷ್ಟು ಸಿಟ್ಟು ಬಂತು.

ನಾನಿ ಸಾಲೆ ಬಿಟ್ಟ ಮೇಲೆ ಮನೆಗೆ ಬಂದ. ಚಿಕ್ಕಮ್ಮ ಕೈಯ ಲ್ಲೊಂದು ಬೆತ್ತ ತಕ್ಕೊಂಡೇ ಬಂದಳು. ನಾನಿ ನಡುಗಿದ. "ಹೇಳು ಆ ರೊಕ್ಕ ಎಲ್ಲಿಂದ ಬಂದವು ನಿನ್ನ ಕಿಸೆಯಲ್ಲಿ!"

ನಾನಿಯು ಸ್ತಬ್ಧ.

"ನನಗೆ ಗೊತ್ತಿದೆ. ಎಲ್ಲಿಂದಲೊ ಕಳವು ಮಾಡಿದ್ದೀ" ಎಂದೆ ರಡು ಬಾರಿ ಥಳಿಸಿದಳು.

ನಾನಿ ಒಮ್ಮೆಲೆ ಅಳಹತ್ತಿದ, ಅಳುವಿನಲ್ಲಿ ಸರಸವ್ವ ಗುಪ್ತವಾ ಗಿಡು ಎಂದು ಹೇಳಿದ್ದನ್ನು ಮರೆತು ಬಿಟ್ಟ.

ಚಿಕ್ಕಮ್ಮನ ಕೆಲಸ ಒಂದೇಸಮನೆ ಸಾಗಿತ್ತು. "ಅವು ಎಲ್ಲಿದ್ದ ವೆಂಬದನ್ನು ಹೇಳು. ಇಲ್ಲವಾದರೆ ಇಲ್ಲಿಯೇ ನಿನ್ನ ಕಾಲು ಕಟ್ಟಿ ಹಾಕುತ್ತೇನೆ."

ನಾನಿ ನಡಗುತ್ತ ಹೇಳಿದ. "ಚಿಕ್ಕಮ್ಮ ............"

"ಗೊತ್ತಾಯಿತು..........ಹ್ಹ! ಹ್ಹ!" ಎಂದು ಚಿಕ್ಕಮ್ಮ ಗಹಗಹಿಸಿ ನಗುತ್ತ "ಅವಳಲ್ಲವೇ-ನಿನ್ನ ಹಡೆದಾಕಿ-ಆಕೆಯೊಬ್ಬಳೇ-ಬಹಳ ನೆಟ್ಟಗೆ" ಎಂದೆನ್ನುತ್ತ ಚಿತ್ತವನ್ನು ಮೂಲೆಗೆ ಬೀಸಿ ಒಗೆದು ಒಳಗೆ ಹೋದಳು.

೭

ಎರಡು ವರ್ಷಗಳು ಕಳೆದವು. ಈ ಸಮಯದಲ್ಲಿ ನಾನಿಯೊಮ್ಮೆ ತನ್ನ ಊರಿಗೆ ಹೋದ. ಈಗೀಗ ಅವನಿಗೆ ತುಸು ಧೈರ್ಯ ಬಂದಿತ್ತು. ಚಿಕ್ಕಮ್ಮ ಬೇಡೆಂದರೂ ಕೇಳಲಿಲ್ಲ. ನಡೆದು ಬಿಟ್ಟ. ಮೋಟಾರುಗಳಿದ್ದರೂ ಕಾಲಿನಿಂದಲೇ ನಡೆಯುವ ಅಭ್ಯಾಸವವನಿಗೆ. ತನ್ನ ಊರು ನೋಡದೆ ಬಹು ದಿನಗಳಾದವಲ್ಲ-ಅದನ್ನು ನೋಡಬೇಕೆಂಬ ಕುತೂಹಲ. ಅಜ್ಜಿ ಅತ್ತಿಗಿಯನ್ನು ನೋಡುತ್ತೇನಲ್ಲಾ ಎಂಬ ಆನಂದ. ಅದರಲ್ಲಿಯೂ ಒಂದು ಮೂಲೆಯಲ್ಲಿ ಚಿಕ್ಕಮ್ಮನ ಹೆದರಿಕೆ ಅಳುಕುತ್ತಿತ್ತು. ಮೊದಲಿಗಿಂತಲೂ ಹೆಚ್ಚಾಗಿ ತಿಳಿಯುತ್ತಿತ್ತು. ಸಾಲೆಯಲ್ಲಿ ಎಲ್ಲರಗಿಂತಲೂ ಮೇಲು ಅವ ಆದರೆ ಅವ ಮೇಲು ಬಂದದ್ದು ಯಾರಿಗೆ ಹೇಳಬೇಕು? ಅದನ್ನು ನೋಡಿ ಸಂತೋಷಪಡುವವರು ಯಾರು?

ಎಷ್ಟು ಬೇಗ ನಡೆದರೂ ಊರು ಬರಲೊಲ್ಲದು. ದಾರಿಯೇನೋ ಸರಳವಾದದ್ದು. ಆದರೆ ಊರಾದರೂ ಎಷ್ಟು ದೂರವಿರಬೇಕು! ಮೊದಲಿದ್ದದ್ದಕ್ಕಿಂತ ದೂರ ಹೋಗಿರಬಹುದೇನು? ಎಂದೊಮ್ಮೆ ಅವನ ಪುಟ್ಟ ತಲೆಯಲ್ಲಿ ಹೊಳೆದು ಹೋಯಿತು. ತನ್ನ ಅಜ್ಜಿ ಹೇಗಿರಬಹುದೆಂದು ಆಲೋಚಿಸಿದ. ತಾನು ಬೇಗನೆ ದೊಡ್ಡವನಾಗಿ ಕೆಲಸಮಾಡಿ ಸರಸಕ್ಕ ಅಜ್ಜಿಯ ಹೊಟ್ಟೆಗೆ ಹಾಕಿ ಸೈ ಅನಿಸಿಕೊಳ್ಳಬೇಕೆಂದು ಉಬ್ಬಿದ ಆದರೆ ದೊಡ್ಡವನಾಗುವದು ಹೇಗೆ? ತನ್ನನ್ನು ತಾನೇ ನೋಡಿಕೊಂಡ. ಹೌದು ಮೊದಲಿಗಿಂತಲೂ ದೊಡ್ಡವನಾಗಿದ್ದೇನೆಂದು ಅವನಿಗೆನಿಸಿತು. ಯಾಕಂದರೆ ಅವನು ಹಾಕಿದ ಕೋಟು ಈಗ ಬಹಳ ಕಿರಿದಾಗಿತ್ತು. ಆದರೆ ಬಿರಡಿ ಹರೆದ-ತಾನೊಮ್ಮೆ ದುಡ್ಡು ಹಾಕಿದ ಹೆಜ್ಜ ಅಗ

ಲಾಗಿತ್ತು. ಮೊದಲಿಗೇ ಇಷ್ಟು ದೊಡ್ಡದಾಗಿದ್ದರೆ ತಾನು ಹೊಡಿಸಿ ಕೊಳ್ಳುತ್ತಿದ್ದಿಲ್ಲೆಂದು ಅವನಿಗೆನಿಸಿತು. ಮುಂದೆ ನೋಡಿದ. ಮುಗಿಲು ಕಾಣುವವರೆಗೂ ನೋಡಿದ. ತನ್ನ ಊರ ತೋಟ ಕಾಣಹತ್ತಿದವು. ತನ್ನಣ್ಣನ ಕುಕ್ಕಿಯಮೇಲೆ ಕುಳಿತು ತೋಟದಲ್ಲಿ ತಿರುಗಿ ಎಳೆನೀರು ಕುಡಿದು-ಸಕ್ಕರಿಕೊಬ್ಬರಿ ತಿಂದದ್ದರ ನೆನಪಾಯಿತು. ಪೇರಲುಹಣ್ಣು ತನ್ನ ಕೈಗೆ ನಿಲುಕದಾಗ ತಾನು ಅಳುತ್ತಿದ್ದದ್ದೂ, ಅಣ್ಣನು ತನ್ನನ್ನು ರಮಿಸುತಿದ್ದದ್ದೂ, ಒಂದೊಂದೇ ನೆನಪಾಗಿ ಅವನ ಕಣ್ಣು ತುಂಬಿ ಬಂದವು. ಮತ್ತೊಂದು ಕ್ಷಣ ಚಿಕ್ಕಮ್ಮನ ತೊಂದರೆ ನೆನಿಸಿ ಮನವು ತಲ್ಲಣಿಸುವದು. ಸಾಲೆಯಲ್ಲಿ ತನ್ನ ಮೇಲಿನ ಮಾಸ್ತರರ ಪ್ರೇಮ ನೋಡಿ, ತಾನೂ ಒಂದಿಲ್ಲೊಂದು ದಿನ ಜಾಣನಾಗುವೆನೆಂಬ ಅವರ ಮಾತು ಕೇಳಿ, ಎದೆ ಉಬ್ಬಿ ಬರುವದು.

ಈ ಆಲೋಚನೆಯಲ್ಲಿ ಊರಹತ್ತಿರವೇ ಬಂದ. ಊರ ಅಗಸಿ ಬಂತು. ಗುಡಿ ಬಂತು. ಕೆರೆ ಕಂಡಿತು. ಕೆರೆ ದಂಡೆಯಮೇಲಿನ ಹಣಮಪ್ಪನ ಗುಡಿಯೂ ಬಂದಿತು. ಇದೆಲ್ಲ ನೋಡಿ ಅವನಿಗೆ ಹೊಸ ಅರಿವೆ ಹಾಕಿಕೊಂಡಷ್ಟು ಸಂತೋಷವಾಯಿತು ಮನೆಗೆ ಹೋದ. ತಲೆಬಾಗಿಲ ಚಪ್ಪರ ಮುರಿದಿತ್ತು. ಮಳೆಯಿಂದ ಗೋಡೆಯ ಮೇಲೆ ಮಣ್ಣಿನ ಗೀರು ಬಿದ್ದಿದವು. ಒಳಗೆ ಒಂದು ಮೂಲೆಯಲ್ಲಿ ಸರಸಕ್ಕ ಕುಳಿತಿದ್ದಳು. ಅವನ ದನಿ ಕೇಳಿದ ಕೂಡಲೆ ಎದ್ದುಬಂದು ಅವನನ್ನು ಎದೆಗವಚಿಕೊಂಡಳು. “ಮಗೂ, ಇಷ್ಟು ದೂರ ನಡೆದು ಬಂದಿಯಾ? ಕಾಲು ನೋಯಲಿಲ್ಲವೇ?” ಎಂದಂದು ಕಾಲು ತೊಳಿಸಿ, ತುಸು ಬೆಲ್ಲಾ ಹಿಟ್ಟು ಕಲಿಸಿ ಕೊಟ್ಟಳು. ತಿಂದು ನೀರು ಕುಡಿದ ನಾನಿ. ಅವನಜ್ಜಿ ಕೆಮ್ಮುತ್ತ ಮೂಲೆಯಲ್ಲಿ ಮಲಗಿದ್ದಳು-

“ನಾನಿ, ಬಾಪ್ಪಾ ಇಲ್ಲೆ” ಎಂದಳು ಅಜ್ಜಿ.

“ಹ್ಯಾಂಗಿದ್ದೀ ಅಜ್ಜೀ” ಎಂದ ನಾನಿ

“ಬಾ ಇಲ್ಲೆ” ಎನ್ನುತ್ತ ಅತ್ತಿತ್ತ ಕೈಮಾಡುತ್ತ ಅಜ್ಜಿ ಎದ್ದು ಕುಳಿತಳು

ನಾನಿ ಬೆಚ್ಚಿ ಬಿದ್ದ. ತಾನಿಷ್ಟು ಹತ್ತರ ಇದ್ದರೂ ಅವಳೇಕೆ ಹೀಗೆ ಮಾಡುತ್ತಾಳೆಂಬದು ನಾನಿಗೆ ತಿಳಿಯಲೊಲ್ಲದು.

ಸರಸಕ್ಕ, "ನಾನೀ, ಅವ್ವನಿಗೆ ಕಣ್ಣು ಕಾಣುವದಿಲ್ಲ. ಮೊದಲೇ ಮಂಜು. ಈಗಂತೂ ಪೂರಾ ಹೋಗಿಬಿಟ್ಟಿವೆ."

ನಾನಿ ಮುಂದಕ್ಕೆ ಹೋದ. ಅಜ್ಜಿ ಅವನ ಅಂಗಾಲಿನಿಂದ ನೆತ್ತಿಯವರೆಗೂ ಕೈಯಾಡಿಸಿ, "ನಾನೀ, ಎಷ್ಟು ದೊಡ್ಡವನಾಗೀಯಪ್ಪ! ದೇವರು ಬೇಗ ನಿನ್ನ ದೊಡ್ಡವನಾಗಿ ಮಾಡಲಿ. ನೂರು ವರ್ಷ ಬಾಳು ಕಂದಾ!" ಎಂದಳು.

ನಾನಿ ನೋಡಿದ. ಅಜ್ಜಿಯ ಮೈಯು ಬರೇ ಎಲುವಿನ ಹಂದರವಾಗಿತ್ತು. "ಅಜ್ಜೀ, ಎಷ್ಟು ಸೊರಗೀ ಅಲ್ಲ!"

"ಮಗೂ, ಅವರು ಹೋದಂದಿನಿಂದ ಇವಳು ನೆಲಹಿಡಿದು ಬಿಟ್ಟಿದ್ದಾಳೆ. ಅನ್ನ-ನೀರು ಹೋಗುವದೇ ಇಲ್ಲ. ತುಸು ಗಂಜಿಯ ಮೇಲೆ ಜೀವ ಹಿಡಿದಿದ್ದಾಳೆ." ಎಂದಳು ಸರಸಕ್ಕ.

"ಹಿಂಗ್ಯಾಕಮ್ಮ, ಉಂಡು ಗಟ್ಟಿಯಾಗು ಅಂದರೆ ನೆಟ್ಟಗೆಲ್ಲಾ"

"ಯಾತಕಪ್ಪಾ, ಈ ಹಾಳು ಜನ್ಮ. ಎಲ್ಲಿಯತನಕ ಬಾಳೋದು"

"ಹೀಗಂದರ ಹ್ಯಾಗಮ್ಮ? ನೀಹೋದರೆ ಮತ್ತೆ ಸರಸಕ್ಕನ್ನ ಯಾರು ನೋಡಬೇಕು?"

"ನೀನಿದ್ದೀಯಲ್ಲಪ್ಪಾ!"

ನಾನಿ ಸುಮ್ಮನಾದ. ಏನೋ ಆಲೋಚಿಸಿದ. ಸರಸಕ್ಕನ ಕಣ್ಣೊಳಗಿಂದ ಒಂದೇಸಮ ನೀರುಸುರಿಯುತ್ತಿತ್ತು. ನಾನಿ ನೋಡಿದ; ಅವನೂ ಅಳಹತ್ತಿದ ಮುದಿಕೆಯ ಒಣಗಿದ ಕಣ್ಣುಕುಣಿಕೆಯೂ ಹಸಿಯಾಯಿತು.

ಸರಸಕ್ಕ ಮೆಲ್ಲಗೆ ನಾನಿಯನ್ನು ತಬ್ಬಿಕೊಂಡು, "ನಾನೀ, ನನ್ನ ಅರಗಳೀ, ನೀನೇ ನನ್ನ ನೋಡಬೇಕಪ್ಪಾ; ನಿನ್ನ ಬಿಟ್ಟು ನನಗಂತೂ ಗತಿ ಇಲ್ಲ. ನೀನು ದೊಡ್ಡವನಾಗಿ ವಿದ್ಯೆ ಕಲಿತು, ದುಡಿದು ನಮ್ಮಿಬ್ಬರನ್ನೂ ಕರಕೊಂಡು ಹೋಗಬೇಕು ನೋಡು.

ಅಜ್ಜಿ ಅವನನ್ನು ಪುನಃ ಕರೆದು ಹತ್ತಿರ ಕುಳ್ಳಿರಿಸಿಕೊಂಡು, "ಕಂದಾ, ಸರಸಕ್ಕ ಹೇಳಿದ್ದು ತಿಳೀತೇ?"

ನಾನಿ ಗೋಣು ಅಲ್ಲಾಡಿಸಿದ.

"ಇಲ್ಲಿ ನೋಡು. ನಾನಾದರೂ ಬಹುದಿನ ಬದುಕುವ ಹಾಗಿಲ್ಲ. ನನ್ನ ತರುವಾಯ ನೀನೇ ಅವಳನ್ನು ನೋಡಬೇಕು."

'ಹಿಂಗ್ಯಾಕ ಅಜ್ಜೀ. ಹಾಂಗ ಕೆಟ್ಟ ಕೆಟ್ಟ ಮಾತು ಆಡಬಾರದು."

ಸರಸಕ್ಕ ಆನಂದದಿಂದ ನಾನಿಯನ್ನು ಮುದ್ದಿಟ್ಟಳು. ಆಮೇಲೆ ಕಿವಿಯಲ್ಲೇನೋ ಹೇಳಿದಳು. ಅದೇನೋ ಬಲ್ಲವರಾರು? ಅದನ್ನು ಕೇಳಿದ ಕೂಡಲೆ ನಾನಿಯ ತೇಜಸ್ವಿಯಾದ ಕಣ್ಣಿನಿಂದ ಮಿಂಚು ಹೊಳೆದಂತೆ ಭಾಸವಾಯಿತು.

೮

"ಹಾಗಾದರೆ ನಾನು ಹೇಳಿದ್ದು ಏನು ಮಾಡಿದಿರಿ? ನಿಮ್ಮ ಒಪ್ಪಿಗೆಯಿಷ್ಟೆ?" ಎಂದು ಚಿಕ್ಕಮ್ಮ ನುಡಿದಳು. ಚಿಕ್ಕಪ್ಪ ಅತ್ತ ಕಡೆ ಮೇಜಿನ ಎದುರಿಗೆ ಒಂದು ಖುರ್ಚಿಯ ಮೇಲೆ ಕುಳಿತಿದ್ದ. ನಾನಿ ಸಾಲೆಗೆ ಹೋಗಿದ್ದ.

ಚಿಕ್ಕಪ್ಪನ ಮೋರೆಯ ಮೇಲೆ ಯಾವದೋ ಒಂದು ಚಿಂತೆ; ಒಂದು ತರದ ಭಯ–ಬಹುದೂರದ ಆನಂದ

ಚಿಕ್ಕಮ್ಮ ಆತುರದಿಂದ, "ನೀವಿನ್ನೂ ಮಾನ-ಮೋಷ ಅಂತ ಅನ್ನುತ್ತಿದ್ದೀರೇನು? ನಿಮ್ಮ ಸ್ವಾಸ್ತಿಯೇನು ಹೇಳಿಕೊಳ್ಳುವ ಹಾಗಿದೆ? ಆ ಮುಂ........ಗೆ ನನ್ನ ಹುಡುಗರಲ್ಲಿ ಒಬ್ಬನ್ನ ದತ್ತಕ ತಗೋ ಅಂತ ಹೇಳಿದರೆ ಅವಳದೊಂದು ಒಣಾ ದಿಮಾಕು–ನನ್ನ ಮಾತು ಕಿವೀ ಮೇಲೆ ಹಾಕಿಕೊಳ್ಳೋದೇ ಇಲ್ಲ. ಅವಳಿಗೆ ಅದೊಂದೇ ಆಸೆ................"

"ನೀ ನನ್ನುವದೆಲ್ಲಾ ಸರಿ! ಆದರೆ................"

"ಸುಟ್ಟಿತು ನಿಮ್ಮ ಆ ಹೆದರಿಕೆ. ನನ್ನಂಥ ಹೆಂಗಸು ಧೈರ್ಯ ಮಾಡುವಾಗ ನಿಮಗ್ಯಾತರ ಚಿಂತೆ? ಆದರ ವ್ಯವಸ್ಥೆ ನಾನು ಮಾಡುತ್ತೇನೆ. ಯಾರಿಗೂ ಸಂಶಯ ಬರದಿದ್ದರೆ ಆಯಿತೋ ಇಲ್ಲೋ?"

" ಎಷ್ಟು ಗಟ್ಟಿಸಿ ಮಾತಾಡುತ್ತಿಯೆ!"

ಅಷ್ಟರಲ್ಲಿ ಹಿತ್ತಲಲ್ಲಿ ಎನೋ ಸದ್ದಾಯಿತು. ಚಿಕ್ಕಮ್ಮ ಹಿತ್ತಲ ಬಾಗಿಲಿಗೆ ಹೋದಾಗ ಮನೆಯ ಒಕ್ಕಲಗಿತ್ತಿ ಲಗುಬಗೆಯಿಂದ ಆ ಕಡೆ ಹೊರಬಿದ್ದಳು.

" ಅಲ್ಲಾ, ನಿಮಗೆ ನಿಮ್ಮ ಮಕ್ಕಳ ಹಿತ ತಿಳಿಯುವದಿಲ್ಲ! ನಾನೆಷ್ಟು ಬಡಕೊಳ್ಳಲಿ!"

"ಅದೆಲ್ಲಾ ಬರಾಬರಿ. ಆದರೆ ದೇವರ ಮುಂದ"

" ನಿಮ್ಮ ದೇವರಾಯ್ತು-ದಿಂಡರಾಯ್ತು. ನಾಳೆ ಬಡತನದಿಂದ ಮಕ್ಕಳು ಉಪವಾಸ ಸಾಯುವಾಗ ಯಾವ ದೇವರು ಬರತಾವು ನೋಡೋಣ!"

"ಅಲ್ಲಾ ಃಃ............ಬೇಲಿ ಎದ್ದು ಹೊಲಾ ಮೆಯ್ದರಃಃ"

"ಸಾಕು ನಿಮ್ಮ ಶಾಸ್ತ್ರ.........."

ಸಾಲೆ ಬಿಟ್ಟಿತು. ನಾನಿ ಬಂದ. ಚಿಕ್ಕಮ್ಮ ಸರಕ್ಕನೆ ಒಳಗೆ ಹೋದಳು. ಚಿಕ್ಕಪ್ಪ ಮೆಲ್ಲಗೆ ಕಣ್ಣು ಮುಚ್ಚಿ ತಲೆ ಮೇಜಿನ ಮೇಲೆ ಇಟ್ಟ.

ನಾನಿಗೇನೋ ಸಂದೇಹ. ಸರಸಕ್ಕನ ಮಾತು ಎಲ್ಲಿಂದಲೋ ಕೇಳಿದಂತಾಗುತ್ತಿತ್ತು.

೬

ಇಂದು ನಾನಿಯ ಹನ್ನೊಂದನೆಯ ಹುಟ್ಟಿದ ಹಬ್ಬ. ಎಂದೂ ಆಚರಿಸದ ಚಿಕ್ಕಮ್ಮನು ಆ ಹಬ್ಬವನ್ನು ಇಂದು ಒಳ್ಳೇ ಸಂಭ್ರಮ ದಿಂದ ಮಾಡಹತ್ತಿದ್ದಾಳೆ. ಅವನ ಮೇಲಿನ ಇಂದಿನ ಅವಳ ಮಮತೆ ನೋಡಿ ನಾನಿಯ ದೈವ ತೆರೆಯಿತೆಂದು ಅನ್ನಹತ್ತಿದ್ದಾರೆ. ಆದರೆ ಸರ ಸಕ್ಕ ಬಂದಿದ್ದರೆ ನೆಟ್ಟಗಿತ್ತೆಂದು ಕೆಲವರು ಮುಂಜಾನೆಯಿಂದ ಗಡಿ ಬಿಡಿ. ತರತರದ ಪಕ್ವಾನ್ನ. ಬೇಕಾದ ನಾಲ್ಕಾರು ಜನರಿಗೆ ಔತನ ಹೋಗಿತ್ತು. ಚಿಕ್ಕಮ್ಮ ನಾನಿಗೆ ಮುಂಜಾನೆ ಎರೆದು ಹೊಸ ಅರಿವೆ

ಹಾಕಿದ್ದಳು. ಚಿಕ್ಕಮ್ಮ ಅವನನ್ನು ನೋಡಿ, "ನಮ್ಮ ನಾನಿ ಕಾಮಣ್ಣನ ಹಾಗೆ ಕಾಣ್ತಾನೆ ...... ನಾನೀ, ಮಂದಿ ದೃಷ್ಟೀ ಬಿಟ್ಟಾರಪಾ-ಜೀವಕ್ಕ ಎಲ್ಲಾರ‌ು....... ಇವತ್ತ ನಿನ್ನ ಹುಟ್ಟಿದ ದಿನಾ....... ಕೆಟ್ಟಮಾತು ಯಾಕ" ಅಹಹ! ಏನು ದಿವ್ಯ ಪ್ರೇಮ!

ಹಬ್ಬವಿದ್ದರೂ ನಾನಿ ಶಾಲೆಯನ್ನೇನೂ ತಪ್ಪಿಸಿದ್ದಿಲ್ಲ. ಅಭ್ಯಾಸದ ಮೇಲಿನ ಅವನ ಲಕ್ಷ್ಯ ಅಂತಹದು. ಮುಂಜಾನೆ ೯ ಗಂಟೆ. ಹದಿನೈದು ನಿಮಿಷ ವಿಶ್ರಾಂತಿ. ನಾನಿ ಹೊರಗೆ ಬಂದ.

ಸಾಲೆಯ ಪಕ್ಕದಲ್ಲಿ ದುರಗಮ್ಮ-ಚಿಕ್ಕಮ್ಮನ ಮನೆಯ ಒಕ್ಕಲಗಿತ್ತಿ-ನಾನಿಗೆ ಸನ್ನೆ ಮಾಡಿದಳು. ಇಬ್ಬರೂ ಊರ ಹೊರಗಿನ ಕೋಟೀ ಬಾವಿಗೆ ಹೋದರು. ಅವಳೇನೋ ಅವನ ಕಿವಿಯಲ್ಲಿ ಹೇಳಿದಳು. ಅವನ ಮೋರೆಯ ಮೇಲಿನ ಹುಟ್ಟಿದ ಹಬ್ಬದ ಆನಂದ ಒಮ್ಮೆಲೆ ಇಳಿಯಿತು. ಸರಸಕ್ಕನ ಮಾತು ತೀರ ಹತ್ತಿರವೇ ಕೇಳಿದಂತಾಯಿತು. ಕೂತ ಸ್ಥಳ ಬಿಟ್ಟು ಒಮ್ಮೆಲೆ ಎದ್ದ.

೧೦

ಇಂದು ಊರಲ್ಲೆಲ್ಲಾ ವಿಚಿತ್ರವಾದ ಸುದ್ದಿ. ಸಂಜೆಯಾದರೂ ನಾನಿಯ ಸುಳುವೇ ಇಲ್ಲವಂತೆ. ಚಿಕ್ಕಮ್ಮನ ಕಾಟಕ್ಕೆ ಬೇಸತ್ತು ಅವ ಕೆರೆ ಬಾವಿ ಪಾಲಾಗಿರಬಹುದೆಂದು ಬಹು ಜನರ ತರ್ಕ.

ಸರಸಕ್ಕನಿಗೆ ಇದೆಲ್ಲ ಸಂಗತಿ ಮರುದಿನ ಗೊತ್ತಾಗಿ ಅವಳ ಎದಿ ಬಡಿಯಲಾರಂಭಿಸಿತು. ಅಷ್ಟರಲ್ಲಿ ಅವಳಿಗೆ ತಾನು ಹೇಳಿದ ಗುಟ್ಟಿನ ಮಾತು ನೆನಪಾಯಿತು. ಅದೇ ನಿಜವಿರಬಹುದೆ? ನಾನಿಯು "ನಿನ್ನನ್ನು ಜೋಪಾನ ಮಾಡುವೆ" ನೆಂದು ಹೇಳಿದ ಮಾತು ಅವಳಿಗೆ ನೆನಪಾಗಿರಬೇಕು. ಆದರೆ ಅಜ್ಜಿಗೆ ಸಮಾಧಾನ ಮಾಡುವದೆಂತು? ಸರಸಕ್ಕ ಎಷ್ಟು ಪರಿ ಹೇಳಿದರೂ ಅಜ್ಜಿ ಮೊಮ್ಮಗನನ್ನು ಕನಕರಿಸುತ್ತ ತೀರಿದಳು.

ಗುಮಾಸ್ತನಿಗೆ ಕೆಲದಿನಗಳ ಮೇಲೆ ಬುದ್ಧಿ ಬರಹತ್ತಿತು. ಕೆಟ್ಟ ಮೇಲೆ ಬುದ್ಧಿ ಬಂದು ಉಪಯೋಗವೇನು? ಅವನಿಗೆ ಅನ್ನ ಹೋಗದು

ಏನೋ ಒಂದು ಭ್ರಮೆ. ಒಡಹುಟ್ಟಿದ ಅಣ್ಣನ ಮಗನ ಗತಿ ಏನಾಯಿತೋ ಎಂದು ದುಃಖ; ಹೆಂಡತಿಯ ಮೂರ್ಖತನಕ್ಕೆ ಬಲಿಯಾದದ್ದಕ್ಕಾಗಿ ಪಶ್ಚಾತ್ತಾಪ. ಹೀಗಾಗಿ ಇತ್ತೀಚೆಗೆ ಅವ ಚಿಂತೆಯಿಂದ ಹಾಸಿಗೆ ಹಿಡಿದ.

೧೧

ಈ ಮಾತು ನಡೆದ ಮೇಲೆ ನಮ್ಮ ಸರಸಕ್ಕನ ಹಳ್ಳಿಯಲ್ಲಿ ಹನ್ನೆರಡು ಸುಗ್ಗಿಗಳಾದರೂ ಕಳೆದಿರಬೇಕು. ಅವಳಿಗೆ ನಾನಿಯ ನೆನಪಾಗದ ದಿನವಿಲ್ಲ. ಅಜ್ಜಿ ಸತ್ತಮೇಲಂತೂ ಅವಳಿಗೆ ಎಲ್ಲವೂ ಬೇಸರ.

ಒಂದು ದಿನ ಸರಸವ್ವನ ಹಳ್ಳಿಯಲ್ಲಿ ಹಗಲೂಟದ ಹೊತ್ತು. ಕಳ್ಳದನ ಹಿಂಡು ಬಿಟ್ಟು ತಪ್ಪಿಸಿಕೊಂಡು ಬರುವ ವೇಳೆ.

ಊರ ಹೊರಗೆ ಏನೋ ಸದ್ದಾಯಿತು. ನೊಡನೋಡುತ್ತಿರಲು ಸರಸವ್ವನ ಮನೆಯ ಮುಂದೆ ಒಂದು ಮೋಟಾರು ನಿಂತಿತು. ಸರಸವ್ವ ಒಮ್ಮೆಲೆ ಒಳಗೆ ಹೋದಳು.

ಮೋಟಾರಿನಿಂದ ಒಬ್ಬ ಕೆಳಗಿಳಿದ. ಅವನೊಬ್ಬ ದೊಡ್ಡ ಹುದ್ದೇದಾರನಿರಬೇಕು. ಅವನು ಕಾಲಲ್ಲಿ ಹಾಕಿದ ಬೂಟು-ಕಾಲಚೀಲಗಳೇ ಸಾಕ್ಷಿ! ಹೊರಗೆ ಮರ್ಯಾದೆಯಿಂದ ನಿಂತ ಜವಾನನೇ ಗುರುತು. ತರುಣನು ಒಮ್ಮೆಲೆ ಸರಸವ್ವನ ಮನೆ ಹೊಕ್ಕ. ಅವಳು ಹೆದರಿಕೆಯಿಂದ ಕಕ್ಕಾವಿಕ್ಕಿಯಾಗಿದ್ದಳು. ಅವ ಹೋದವನೇ, "ಯಾರಿದ್ದೀರಿ?" ಎಂದ.

ಅವಳಿಗೇನೋ ದನಿಯ ಗುರುತು-ಬಹು ದೂರದ ಗುರುತು ಮೆಲ್ಲಗೆ ಅಡಿಗೆ ಮನೆಯ ಬಾಗಿಲಿಗೆ ಬಂದಳು. "ತಮಗಾರುಬೇಕು?" ಎಂದಳು.

ಅವ ತುಸು ಮುಂದಕ್ಕೆ ಹೋಗಿ, "ಸರಸಕ್ಕ-ಅಜ್ಜಿ ಇಲ್ಲವೇ?" ಎಂದ.

ಸರಸಕ್ಕ ಪಡಸಾಲೆಗೆ ಬಂದಳು. ಮೈಮೇಲೆ ರೋಮಾಂಚನಗಳೆದ್ದವು. ಕಣ್ಣು ವಿಶಾಲವಾದವು. ನೆಟ್ಟಗೆ ನೋಡಿದಳು. ಹೌದು, ತನ್ನವನೇ. ತಾನೇ ತಿನಿಸಿ-ಉಣಿಸಿ ದೊಡ್ಡವನನ್ನಾಗಿ ಮಾಡಿದ್ದು.

ಮುಚ್ಚಂಜೆಯ ಕೆಂಗದಿರು ಸೋಗೆಯೊಳಗಿಂದ ಹಾಯ್ದು ತಕ್ಕಿ ವಾಗಿಲಿಗೆ ವೋರೆ ಮಾಡಿದ್ದ ಸರಸಕ್ಕನ ಮೇಲೆ ಬಿದ್ದಿದ್ದವು. ಅವ ನೋಡಿದ. ಹೌದು! ಇವಳೇ ತನ್ನ ಸರಸಕ್ಕ.

" ಸರಸಕ್ಕಾ! "

"ನಾನೀ! ನನ್ನ ಕಂದಾ!"

ನಾನಿ ಸರಸಕ್ಕನ ಕಾಲಿಗೆ ಎರಗಿದ. ಕಣ್ಣೀರಿನಿಂದ ಪಾದ ತೋಯಿಸಿದ. ಸರಸಕ್ಕ ನಾನಿಯನ್ನು ತಬ್ಬಿಕೊಂಡಳು. ಇಬ್ಬರ ಕಣ್ಣಿ ನಿಂದಲೂ ಒಂದೇಸನು ನೀರು ಹೋಗುತ್ತಿತ್ತು. ಅದೇನು ಬರಗಾಲದ ಮಳೆಯೋ? ಹೌದು! ಆ ಮಳೆಗಾಗಿ ಆ ಎರಡೂ ಬಗೆಗಳು ಕಂಗಾಲಾ ಗಿದ್ದವು.

ನಾನಿ ಮೆಲ್ಲಗೆ ಎದ್ದ-ಕೂಸು ತಾಯಿಯ ಮಗ್ಗುಲಿಂದ ಏಳು ವಂತೆ.

"ಸರಸಕ್ಕ, ಅಜ್ಜಿ ಎಲ್ಲಿ? " ಎಂದ.

"ಮಗೂ, ಸ್ವರ್ಗಕ್ಕೆ ಹೋದಳಪ್ಪಾ! ನನ್ನನ್ನು ಅನಾಥಿಯ ನ್ನಾಗಿ ಮಾಡಿ ಹೋದಳು!" ಸರಸಕ್ಕನಿಗೆ ದುಃಖ ನಿಲ್ಲಲಿಲ್ಲ. ಗಟ್ಟಿ ಯಾಗಿ ಅಳಹತ್ತಿದಳು. ನಾನಿಯೂ ಸಣ್ಣ ಹುಡುಗನಂತೆ ಅಳ ಹತ್ತಿದ.

ಆ ಆನಂದಾಶ್ರುಗಳು ಒಮ್ಮೆಲೆ ದುಃಖ ಬಿಂದುಗಳಾದವು. ಹೌದು ಅವರೀವರಿಗೂ ಆ ಪ್ರಸಂಗದ ನೆನಪಾಗಿರಬೇಕು. ನಾನಿ ನಾಲ್ಕು ವರ್ಷದ ಕಂದನಿದ್ದಾಗ ಸರಸಕ್ಕನಿಗೆ ಇದೇ ಬಗೆಯ ಪ್ರಶ್ನೆ ಕೇಳಿದ್ದ. ಅವಳಾದರೂ ಇದೇ ಬಗೆಯ ಉತ್ತರ ಕೊಟ್ಟಿದ್ದಳು.

ನಾನಿಗೆ ಅಣ್ಣನ ಹಾಗೂ ಅಜ್ಜಿಯ ನೆನಪಾಗಿ ಅನಿವಾರ ದುಃಖ ವಾಯಿತು. ಆದರೆ ಅಜ್ಜಿಗೆ ಕೊಟ್ಟ ಮಾತು ಮಾತ್ರ ಮರೆತಿದ್ದಿಲ್ಲ.

"ಸರಸಕ್ಕ! ಅಳಬೇಡ. ಅಜ್ಜಿ ಹೇಳಿದ್ದು ನೆನಪಿಲ್ಲೇ. ನಾನಿರುವ ವರೆಗೆ ನಿನಗೇನು ಬಂದಿದೆ? ನಡಿ! ಇನ್ನು ಮೇಲೆ ದುಃಖಿಸಬೇಡ."

"ಎಲ್ಲಿಗೆ ಮಗೂ!"

"ನನ್ನ ಸಂಗಡ"

---

# ಕೊಡೆಯ ಸಮಸ್ಯೆ

ಮಳೆ ನಿಂತು ಆಗಲೇ ಹದಿನೈದು ನಿಮಿಷ. ನಮ್ಮೂರ ಪೋಸ್ಟಾಫೀಸಿನ ಮುಂದೆ ತೊಯ್ಸಿಗೊಳ್ಳಲಾರದೆ ನಿಂತ ಜನರ ಗುಂಪು ಕರಗುತ್ತಾ ಬಂತು. ನನಗೂ ಅಲ್ಲಿ ತುಸು ಕೆಲಸ. ಆದರೂ ಪೋಸ್ಟ ಮಾಸ್ತರರಿಗೆ ಕೆಲಸ ಜೋರಾಗಿದ್ದದರಿಂದ ಅರ್ಧ ಗಂಟೆ ಕಾಲ ತಡೆಯು ಬೇಕಾಯಿತು. ಆಗ ಎಲ್ಲರೂ ಹೋಗಿ ಒಬ್ಬನು ನಿಂತಿದ್ದ. ಅವನೂ ಪತ್ರ ಇಸಗೊಂಡು ಹೊರಟ.

ಕೂಡಲೆ ನಾನು, "ಸ್ವಾಮೀ, ಕೊಡೆ ಮರೆತು ಹೊರಟಿರಲ್ಲ!" ಎಂದೆ. ಆಗ ನನಗೊಂದು ಬಗೆಯ ಆನಂದ. ಅದೇಕೆನ್ನುವಿರಾ? ಅನಾಯಾಸವಾಗಿ ಸಿಕ್ಕ ಪರರ ಒಡವೆಯನ್ನು ಅನ್ಯಾಯವಾಗಿ ಅಪಹರಿಸಲಿಲ್ಲವಲ್ಲಾ ಎಂದು! ದುಡ್ಡಿಲ್ಲದೆ ಉಪಕಾರಮಾಡಲು ಬರುತ್ತದಲ್ಲಾ—ಎಂದು; ಹೇಗೆಯೇ ಎಲ್ಲರೂ ಮಾಡುತ್ತಿದ್ದರೆ ಈಗೆಂಟು ದಿನಗಳ ಹಿಂದೆ ಕಳಕೊಂಡ ನನ್ನ ಕೊಡೆಯೂ ಸಿಗುತ್ತಿತ್ತಲ್ಲವೇ? ಎಂದು ಒಂದು ಬಗೆಯ ವಿಷಾದ. ಆದರೂ ನನ್ನ ಕರ್ತವ್ಯ ಮಾಡಿದೆನೆಂದು ಆ ವಿಷಾದದಲ್ಲಿಯೂ ಕೊಂಚ ಸಮಾಧಾನದ ಛಾಯ ಮೂಡಿತ್ತು.

ಬಂದವರು ಒಂದರಕ್ಷಣ ತಿರುಗಿದರು. ಅದೆಷ್ಟು ಹೊತ್ತು? ರೆಪ್ಪೆ ಹೊಡೆವಷ್ಟು ಕೂಡಲೆ, "ಹೌದು ಸ್ವಾಮೀ ನನ್ನದು ಬಲು ಮರೆವಿನ ಸ್ವಭಾವ" ಎಂದೆನ್ನುತ್ತ ಮೆಲ್ಲಗೆ ಆ ಕೊಡೆಯನ್ನೆತ್ತಿದರು. ಅವರಿಗೂ ಒಂದು ಬಗೆಯ ಆನಂದ! ಆ ಆನಂದದ ಭರದಲ್ಲಿ ಅವರ ಅಂಗೈಯೂ ಮೋರೆಯೂ ಬೆವತಂತೆ ಕಂಡವು. ಅದೇ ಆನಂದದಲ್ಲಿ ಸರಸರ ಹೊರಟರು.

ಮಳೆ ಮತ್ತೆ ಚಿಟಿಚಿಟಿ ಹತ್ತಿತು. ಈಗೆಂಟು ದಿನಗಳಿಂದ ಹಾಗೇ ಮಳೆ ಹತ್ತಿದ್ದರಿಂದ ಅನ್ನಿ, ಅಥವಾ ನಾನು ಕೊಡೆ ಕಳಕೊಂಡದ್ದರಿಂದ ಅನ್ನಿ—ನನಗೆ ಮಾತ್ರ ನಮ್ಮೂರ ಹವೆ ಎಂದಿಗಿಂತಲೂ

ಬಹು ತಣ್ಣಗೆ ಹತ್ತುತ್ತಿತ್ತು. ಕೆಲಸ ಮಾಡದೆ ನಿರ್ವಾಹವಿಲ್ಲವಷ್ಟೆ; ಹೊರಟೆ, ತಲೆ ಬಗ್ಗಿಸಿ ಎಡದ ಕಂಕುಳಲ್ಲಿ ಬಲಗೈ ಬಲಕಂಕುಳಲ್ಲಿ ಎಡಗೈ ಸೇರಿಸಿ ಆಗಾಗ ನಡಗುತ್ತ ಹೊರಟೆ. ಅದೇ ಕೊಡೆ ತಕ್ಕೊಂಡು ಲಗುಬಗೆಯಿಂದ ಹೋಗುವ ನಮ್ಮ 'ಸ್ವಾಮಿ' ನನ್ನನ್ನು ಕೊಂಚ ಅತ್ತಿತ್ತ ಒಯ್ದಿದ್ದರೆ ಹಾಯಾಗಿರುತ್ತಿತ್ತಲ್ಲಾ-ನನ್ನ ಉಪಕಾರಕ್ಕೆ ಕೊಂಚ ಕೃತಜ್ಞತೆ ತೋರಿದಂತಾಗುತ್ತಿತ್ತಲ್ಲಾ! ಎಂಬ ವಿಚಾರವು ನನ್ನ ಮನಸಿನಲ್ಲಿ ತಲೆಯೆತ್ತದೆ ಇರಲಿಲ್ಲ.

ಹಾಗೇ ಆಲೋಚಿಸುತ್ತ ನಾಲ್ಕು ಹೆಜ್ಜೆ ಮುಂದೆ ಹೋದೆ. ಅಷ್ಟರಲ್ಲಿ ಬಲಗಡೆಯ ಬೀದಿಯಿಂದ ಒಂದು ವ್ಯಕ್ತಿಯು ಗಾಬರಿಯಾಗಿ ಓಡುತ್ತ ನನ್ನೆಡೆಗೆ ಬಂದು,

"ಮಾರಾಯಾ, ಇದೇ ಈಗ ನಿನ್ನ ಮಗ್ಗಲಿಗೆ ಒಂದು ಕೊಡೆ ಇಟ್ಟಿದ್ದೆ. ಅದನ್ನೇನಾದರೂ ನೋಡಿದೆಯಾ? ಅದೇನು ಅಲ್ಲಿಯೋ ಇದೆಯೋ?" ಎಂದ.

ಮತ್ತೊಬ್ಬರಾಗಿದ್ದರೆ, "ನನ್ನನ್ನೇನು ಕಾಯಲಿಕ್ಕೆ ಇಟ್ಟಿದ್ದೀಯಾ?'' ಎಂದು ಎದೆ ಸೆಟೆಸಿ ಅನ್ನುವವನೇ ನಾನು? ಆದರೆ ಅವನ ಮೋರೆಯ ಮೇಲಿನ ದೈನ್ಯ ನೋಡಿ, ನನ್ನ ಅಂತಃಕರಣವು ದ್ರವಿಸಿತು.

ನಾನು ವಿಚಾರ ಮಾಡುತ್ತ ನಿಂತಂತೆ ಆ ವ್ಯಕ್ತಿಯ ದೈನ್ಯ ಹೆಚ್ಚುತ್ತ ಬಂತು.

"ಇನ್ನೂ ಕೊಂಡು ನಾಲ್ಕು ದಿನಗಳಾಗಿಲ್ಲ. ಹೊಸ ಕೊಡೆ ಹೋದರೆ ಬೇರೆ ತಕ್ಕೊಳ್ಳಲಿಕ್ಕಾಗುವದಿಲ್ಲ."

ನನಗೂ ಕೆಡಕೆನಿಸಿದ್ದು ಸ್ವಾಭಾವಿಕ; ಯಾಕಂದರೆ ನಾನೂ ಕೊಡೆ ಕಳಕೊಂಡವನೇ!

ಆಗ ನಾನು ಆ ಸ್ವಾಮಿಯನ್ನು ಕೂಗಿದೆ; ನಾಲ್ಕುಬಾರಿ ಕೂಗಿದೆ. ಪಾಪ! ಬಹಳ ಕೆಲಸವಿರಬಹುದು. ಬಹು ಜೋರಾಗಿ ನಡೆದಿದ್ದ. ಅಂತೆಯೇ ನನ್ನ ಕೂಗು ಅವನಿಗೆ ಕೇಳಿರಲಿಕ್ಕಿಲ್ಲ.

ವ್ಯಕ್ತಿಗೆ ಸಂಜ್ಞೆ ತಿಳಿದಿರಬೇಕು. ಆದ್ದರಿಂದಲೇ ಅತ್ತಕಡೆಗೆ ಓಡಿತು. ಸ್ವಾಮಿಯನ್ನು ಮುಟ್ಟಿತು.

ನಾನಿನ್ನೂ ತುಸು ದೂರದಲ್ಲಿಯೇ ಇದ್ದೆ.

"ಸ್ವಾಮೀ, ಇದು ನನ್ನ ಕೊಡೆ. ನೀವು ಮರೆತು ತಂದಂತೆ ಕಾಣುತ್ತದೆ." ಎಂದು ಓಡಿದ ಆಯಾಸದಿಂದ ಉಬ್ಬಸಬಡುತ್ತ ವ್ಯಕ್ತಿ ಕೇಳಿತು.

ಸ್ವಾಮಿ ಕಕ್ಕಾವಿಕ್ಕಿಯಾದರೂ ಅದರಲ್ಲೂ ಕೊಂಚ ಧೈರ್ಯ ತಂದುಕೊಂಡು, "ನಿಮಗಾರು ಹೇಳಿದರು ?"

"ಯಾರು ಹೇಳಲಿಕ್ಕೆ ಬೇಕು ಸ್ವಾಮೀ ! ನೀವು ಹಿಡಿದದ್ದು ಕಾಣುವದಿಲ್ಲವೇ!"

"ಇದೊಳ್ಳೇ ಕೆಲಸ ! ನಿಮ್ಮ ಕೊಡೆಯಂಥ ಕೊಡೆಯೇ ಇರಬಾರದೇ ಈ ಜಗತ್ತಿನಲ್ಲಿ ?"

ಅದೇ ಸಮಯಕ್ಕೆ ನಾನೂ ಅಲ್ಲಿಗೆ ಹೋದೆ. ನನ್ನ ನೋಡಿದ ಕೂಡಲೆ ಸ್ವಾಮಿಯ ಮೋರೆಯ ಮೇಲೆ ಹುಚ್ಚು ಕಳೆ ಸುರಿಯಹತ್ತಿತು. ವ್ಯಕ್ತಿಯ ಧೈರ್ಯ ಹೆಚ್ಚಾಯಿತು.

"ಏನು ಸ್ವಾಮೀ ! " ಎಂದೆ.

ಸ್ವಾಮಿ ಮೆಲ್ಲಗೆ ಕೊಡೆಯನ್ನು ವ್ಯಕ್ತಿಗೆ ಕೊಡುತ್ತ,

"ಕೊಡೆ ಇವರದಂತೆ; ನನ್ನದೇನೋ ಅಂತ ತಂದೆ. ಈಗ ನೆನಪಾಯಿತು; ನನ್ನ ಕೊಡೆ ಮನೆಯಲ್ಲಿ ಮರೆತಿದ್ದೇನೆಂದು ! "

ಕೊಡೆ ಕೊಡುವಾಗ ಸ್ವಾಮಿಯ ಕೈ ಮೋರೆ ಬೆವರಿದವು. ವ್ಯಕ್ತಿಮಾತ್ರ ಆನಂದದಿಂದ ನನಗೆ ಕೈ ಮುಗಿದ. ನಾನೇ ಅವನ ಕೊಡೆ ಅವನಿಗೆ ದೊರಕಿಸಿ ಕೊಟ್ಟಂತಾಯಿತಂತೆ !

ಅದೇನೋ ನನಗೆ ಗೊತ್ತಿಲ್ಲ

# ವೀಣಾ-ನಾದ

ಸಾವಿರಾರು ವರ್ಷಗಳ ಹಿಂದಿನ ಮಾತು. ದೂರ ದೇಶದ ಅರಸನೊಬ್ಬನು ಸಮುದ್ರದ ದಂಡೆಗುಂಟ ತಿರುಗಾಡುತ್ತಿದ್ದನು. ಆವ ನೊಬ್ಬ ಕವಿ. ತಿರುಗಾಡುತ್ತಿದ್ದಂತೆಯೇ ಕವನವೊಂದನ್ನು ರಚಿಸಿದನು; ಹಾಡಹತ್ತಿದನು. ಹಾಡುತ್ತಿದ್ದಂತೆಯೇ ಅವನ ಹೃದಯ ಅಲುಕಿತು; ಉಬ್ಬಿ ಬಂತು. ಬಾಷ್ಪಗಳುದುರಿದವು. ಸಮುದ್ರದಲ್ಲಿ ಕೂಡಿ ಮುತ್ತುಗಳಾದವು.

ಮುನ್ನೂರು ವರ್ಷಗಳ ಹಿಂದೆ ಜಾಲಗಾರನೊಬ್ಬ ಬಂದ. ಅಲ್ಲಿ ಅತಿ ಸುಂದರವಾದ ಮುತ್ತೊಂದನ್ನು ಹುಡುಕಿ ತೆಗೆದ. ಅದು ಹೃದಯದ ಆಕಾರವನ್ನು ಹೋಲುತ್ತಿತ್ತು. ಅದನ್ನು ರಾಜನಿಗೆ ಕೊಟ್ಟ. ರಾಜನು ರಾಜ್ಞಿಗೆ ಕಾಣಿಕೆಯಿತ್ತ.

ಅರಸಿಗೆ ರೂಪ-ಗುಣಗಳಿದ್ದರೂ ಸುಖವಿರಲಿಲ್ಲ. ಯಾಕಂದರೆ ಈ ಕತೆಯ ವೇಳೆಗೆ ಅವರು ಇದ್ದೊಬ್ಬ ಮಗಳನ್ನು ಕಳಕೊಂಡು ಹನ್ನೆರಡು ವರ್ಷಗಳಾಗಿದ್ದವು. ಗಂಡ-ಹೆಂಡರಿಬ್ಬರೂ ತಮಗಿನ್ನು ಮಕ್ಕಳಾಗುವ ಆಸೆಬಿಟ್ಟಿದ್ದರು.

ಒಂದು ದಿನ ಅರಸಿಯು ನೌಕೆಯಲ್ಲಿ ವಿಹರಿಸಿ ಗುಡಿಗೆ ಹೊರಟಾಗ ಒಬ್ಬ ಬಡವಿಯು ತನ್ನಿಬ್ಬರು ಮಕ್ಕಳೊಂದಿಗೆ ಬಂದು ಏನಾದರೂ ಕೊಡಿರೆಂದು ಕೇಳಿದಳು. ಅರಸಿಯು ಬಡವಿಗೆ ಬಂಗಾರದ ನಾಣ್ಯ ಕೊಟ್ಟಳು. ಅತಿ ಹರುಷದಿಂದ ಆ ಬಡವಿಯು, "ದೇವರು ನಿಮಗೆ ಕಲ್ಯಾಣ ಮಾಡಲಿ!" ಎಂದು ಹರಿಸಿದಳು.

ಅರಸಿಯು ಗುಡಿಗೆ ಹೋದಳು. ಅಲ್ಲಿ ಸಾಧುವೊಬ್ಬನು ಉಪದೇಶಿಸುತ್ತಿದ್ದನು. ಉಪದೇಶವಾದ ಮೇಲೆ ಸಾಧುವು, ಕೂಡಿದ ಎಲ್ಲ ಮಕ್ಕಳಿಗೆ, "ನೀವು ನನ್ನ ರತ್ನಗಳು'' ಎಂದು ಹರಿಸಿದನು. ಅವಳು ಮನದಲ್ಲಿ, "ಅವರು ಕೊಟ್ಟ ಮುತ್ತಿನ ಬದಲು, ಅದೇ ಮಗುವಾಗಿದ್ದರೆ?'' ಎಂದು ಮರುಗಿದಳು.

ಗುಡಿಯಿಂದ ಹೊರಟ ಅರಸಿಯು ತನ್ನ ನೌಕೆಯಲ್ಲಿ ಕುಳಿತು ಅರಮನೆಗೆ ಹೋದಳು. ದಾರಿಯಲ್ಲಿ ಅವಳಿಗೆ ನಿದ್ದೆಹತ್ತಿತು; ಕನಸು ಬಿತ್ತು. ಕನಸಿನಲ್ಲಿ ಯಾವದೋ ದನಿ ಕೇಳಿಸಂತಾಯಿತು. "ಅವಳನ್ನು ಕಳೆದುಕೊಳ್ಳಬಾರದೆಂದು ನಿನ್ನ ಆಸೆಯಿದ್ದರೆ ಕವನ-ಗಾನಗಳ ವಿಷಯವಾಗಿ ಎಚ್ಚರದಿಂದಿರು."

ಅವಳು ಅರಮನೆಗೆ ಬರುತ್ತಿರುವಾಗಲೇ ದಾಸಿಯರು ಜಗಳಾಡುವ ಸದ್ದು ಕೇಳಬಂತು. ಎಲ್ಲರೂ ಅರಸಿಯ ಕಡೆ ಧಾವಿಸಿ ಬಂದರು. ಅರಮನೆಯ ಮುಂಬಾಗಿಲು ತೆರೆದ ತಪ್ಪನ್ನು ಒಬ್ಬರ ಮೇಲೊಬ್ಬರು ಹಾಕಿ, ಒಬ್ಬರನ್ನೊಬ್ಬರು ಬಯ್ಯುತ್ತಿದ್ದರು. ಯಾರಾದರೊಬ್ಬರು ಅದನ್ನು ತೆರದಿರಬೇಕು; ಯಾಕಂದರೆ ಯಾರೋ ಒಬ್ಬರು ಒಳಗೆ ಹೊಕ್ಕು ಹಸುಳೆಯೊಂದನ್ನು ಇಟ್ಟು ಹೋಗಿದ್ದಾರೆ. ಅದು ಅಳುವದನ್ನು ಅವರು ಕೇಳಿದರು. ಒಳಗೆ ನೋಡಿದರು. ಮಗು ಮಲಗಿತ್ತು-ಹನ್ನೆರಡು ವರುಷ ಬರಿದಾಗಿ ಬಿದ್ದಿದ್ದ ಆ ಬೆಳ್ಳಿಯ ತೊಟ್ಟಿಲಲ್ಲಿ!

ಅರಸಿ ತುಸು ಗದ್ಗರಿಸಿ, ಎಲ್ಲರಿಗೂ ದೂರ ಸರಿಯಲು ಸನ್ನೆ ಮಾಡಿ, ತನ್ನ ಕೋಣೆಗೆ ಹೋದಳು ಅಲ್ಲಿದ್ದ ಹೆಣ್ಣುಮಗುವನ್ನು ನೋಡಿದಳು. ಅರಸಿಯನ್ನು ನೋಡಿದ ಕೂಡಲೆ ಕೂಸು ಅಳು ನಿಲ್ಲಿಸಿತು. ಮುಂಜಲ ಬೆಳಕಿನಂತಹ ಮೈಬಣ್ಣ; ಕಡಲಿನಂತೆ ನೀಲವಾದ ಕಣ್ಣು. ತನ್ನ ಎರಡೂ ಕೈಗಳನ್ನು ಮುಂದಕ್ಕೆ ಚಾಚಿತು ಅರಸಿಯು ಎತ್ತಿಕೊಂಡು ಮುತ್ತಿಟ್ಟಳು. ಏನೋ ನೆನಪಾದಂತಾಯಿತು. ಮುತ್ತುರತ್ನಗಳನ್ನಿಟ್ಟ ಕಿರಿಮನೆಗೆ ಹೋದಳು. ಬಾಗಿಲು ತೆರೆದಿತ್ತು. ರಾಜನು ಕೊಟ್ಟ ಮುತ್ತು ಮಾಯವಾಗಿತ್ತು. ಆಗ ಅವಳಿಗೆ, ದೇವರು ತನ್ನ ಅಂತರಂಗ ತಿಳಿದು, ಭಿಕ್ಷುಕಿಯ ಹರಕೆಯಂತೆ ಈ ಫಲ ಕೊಟ್ಟನೆಂದು ಅನಿಸಿತು.

ಆನಂದದಿಂದ ಅವಳು ತನ್ನ ಮೊದಲಿನ ಮಗುವಿನಂತೆಯೇ ಅದಕ್ಕೆ ಅರಿವೆ ತೊಡಿಸಿದಳು. ಅರಸನನ್ನು ಕರೆಕಳುಹಿದಳು. ಎಲ್ಲ ಸಂಗತಿಯನ್ನವನಿಗೆ ಅರುಹಿದಳು.

ಇದು ಯಾವನೋ ಒಬ್ಬ ಕಳ್ಳನ ಕೆಲಸವಿರಬಹುದೆಂದು ಅರಸನು ಭಾವಿಸಿದನು. ಮುತ್ತನ್ನೊಯ್ದು ಕೂಸನ್ನಿಟ್ಟು ಹೋಗಿರಬೇಕೆಂದು ಅವನ ಕಲ್ಪನೆಯಾಯಿತು. ಆದರೆ ಆ ಕೂಸಿನಿಂದ ಅರಸಿಗೆ ಇಷ್ಟು ಆನಂದವಾಗುತ್ತಿರುವದರಿಂದ ಕೂಸನ್ನಿಟ್ಟುಕೊಳ್ಳಲು ಅನುಮತಿಯಿತ್ತನು.

* * * *

ರಾಜ್ಞಿಯು ಮಗಳಿಗೆ ಮಾಲಗರಿ ಎಂದು ಹೆಸರಿಟ್ಟಳು.

* * * *

ಮಾಲಗರಿಯು ದೊಡ್ಡವಳಾದಳು. ತುಂಬಿದ ಮೈಕಟ್ಟು, ಹೊನ್ನಿನ ಮೈಬಣ್ಣ, ದಿನವೆಲ್ಲವನ್ನೂ ಆಟ-ನೋಟಗಳಲ್ಲಿ ಕಳೆಯುತ್ತಿದ್ದಳು. ಮೃದುವಾಗಿ. ಮಧುರವಾಗಿ ನಗುವಳು ಆದರೆ ಎಲ್ಲಿಯಾದರೂ ಕೆಟ್ಟ ಮಾತು ಕೇಳಿದರೆ, ಪರರು ಕಷ್ಟದಲ್ಲಿದ್ದದ್ದನ್ನು ನೋಡಿದರೆ ಅವಳು ದುಃಖಿತಳಾಗುವಳು.

* * * *

ವಸಂತಋತುವಿನ ಒಂದು ರಾತ್ರಿ. ಅರಮನೆಯ ಬದಿಗೆ ಯಾರೋ ಒಬ್ಬರು ವೀಣೆಯೊಂದಿಗೆ ಹಾಡುತ್ತ ಹೋದರು ಮಾಲಗರಿಯು ಚಟ್ಟನೆ ಎದ್ದಳು. ಕಿಡಕಿಯಲ್ಲಿ ಕುಳಿತು ಕೇಳಹತ್ತಿದಳು. ಹಾಡು ಕೇಳುವವರೆಗೂ ಆಲಿಸಿದಳು. ಒಮ್ಮೆಲೆ ಮೂರ್ಛಿತಳಾದಳು. ಮೈ ಕೆಂಡದಂತಾಯಿತು. ಮೂರು ದಿನಗಳವರೆಗೆ ಮೈಮೇಲೆ ಎಚ್ಚರ ಬರಲಿಲ್ಲ. ತನ್ನನ್ನು ಯಾರೋ ಕರೆಯುತ್ತಾರೆಂದೂ ತಾನು ಹೋಗಲೇಬೇಕೆಂದೂ ಬಡಬಡಿಸಹತ್ತಿದಳು. ಮೂರ್ಛೆ ತಿಳಿದೆದ್ದಾಗ ತಾಯಿಯ ಮಗ್ಗಲಲ್ಲಿದ್ದಳು.

ಅರಸಿಗೆ ಹಿಂದಕ್ಕೆ ಕನಸಿನಲ್ಲಿ ಕೇಳಿದ ಮಾತುಗಳು ನೆನಪಾದವು. ರಾಜಧಾನಿಯಲ್ಲಿ ಗಾಯನ-ವಾದನಗಳು ಕೇಳದಂತೆ ಮಾಲಗರಿಯನ್ನಿಡುವದು ಅಶಕ್ಯವಾದದ್ದರಿಂದ ಸಮಿಾಪದಲ್ಲಿದ್ದ ಚಿಕ್ಕ ನಡುಗಡ್ಡೆಯಲ್ಲಿರಬೇಕೆಂದು ಮಾಡಿದಳು.

ನಡುಗಡ್ಡೆಯು ಚಿಕ್ಕದಾಗಿ ಸಮುದ್ರವನ್ನೇ ದಿಟ್ಟಿಸಿ ನೋಡುತ್ತಿರುವಂತೆ ಕಾಣುತ್ತಿತ್ತು. ನಡುಗಡ್ಡೆಯ ತುಂಬ ಕಿತ್ತಳೇ ಹಣ್ಣಿನ ಬನಗಳು-ಹೂದೋಟಗಳು; ಅವುಗಳ ನಡುವೆ ರಾಜ್ಞಿಯ ಅರಮನೆ. ತೋಟದ ಆಳುಗಳನ್ನು ಬಿಟ್ಟರೆ ಮತ್ತಾರೂ ಅಲ್ಲಿ ನಿವಾಸಿಗಳಿಲ್ಲ.

* * * *

ಅರಸನಿಗೆ ನಡುಗಡ್ಡೆಗೆ ಹೋಗುವ ವಿಚಾರ ಬಾರದ್ದರಿಂದ, ಅವ ಅಲ್ಲಿ ಹೋಗಲು ಸಮ್ಮತಿಸಲಿಲ್ಲ. ಆದ್ದರಿಂದ ರಾಜ್ಞಿಯೊಬ್ಬಳೇ ಮಾಲಗರಿಯನ್ನು ಕರೆದುಕೊಂಡು ನಡುಗಡ್ಡೆಗೆ ಹೊರಟು ಹೋದಳು

ನಡುಗಡ್ಡೆಯಲ್ಲಿದ್ದ ಜನರು ಗಾಯನ-ವಾದನಗಳನ್ನು ಮಾಡಬಾರದೆಂದು ಕಟ್ಟಪ್ಪಣೆ ಕೊಡಿಸಿದಳು. ಸಾಗರದ ಹಾಗು ಗಾಳಿಯ ಸಪ್ಪಳದ ಹೊರತು ಅಲ್ಲಿ ಮತ್ತಾವ ಸದ್ದೂ ಆಗುತ್ತಿದ್ದಿಲ್ಲ. ಇದರಿಂದ ಮಾಲಗರಿಗೆ ಹೇಗೆ ಹೇಗೋ ಅನಿಸಿತು.

ಮೊದಲಿನ ಸಂತಸ-ಉಲ್ಲಾಸಗಳು ಮಾಲಗರಿಗೆ ಏನು ಮಾಡಿದರೂ ಬರಲಿಲ್ಲ. ಅವಳು ಅಪರೂಪವಾಗಿ ಆಡುವಳು, ನಗುವಳು. ಆದರೂ ಸುತ್ತುವರೆದ ಕಡಲು ನೋಡಿ, ಸಾಗರದ ಗಂಭೀರ-ನಿನಾದ ಕೇಳಿ ಶಾಂತಳಾಗುವಳು. ಕಡಲಿನ ಧಡಕ್ಕೆ ತಾಸುಗಟ್ಟಲೆ ಕುಳಿತು ಸಮಾಧಾನಪಟ್ಟುಕೊಳ್ಳುವಳು.

ಅವಳು ದೊಡ್ಡವಳಾದ ಹಾಗೆ ಓದಿನಲ್ಲಿಯೇ ತನ್ನ ವೇಳೆ ಕಳೆಯುವಳು. ಅರಮನೆಯ ವಾಚನಾಲಯದಲ್ಲಿ ಬಹು ವೇಳೆ ಕುಳಿತುಕೊಳ್ಳುವಳು. ಒಂದು ದಿನ ಯಾವದೋ ಒಂದು ಪದ್ಯ ಓದಿ ಮಾಲಗರಿಯ ಹೃದಯ ಉಕ್ಕಿಬಂತು. ಕಣ್ಣುಗಳು ಕಾಂತಿಯುಕ್ತವಾದವು, ಗಲ್ಲಗಳು ಮಿರುಗಿದವು. ಅವಳ ಮೈ ಕಾದಂತೆ ಅನಿಸಿತು. ತನ್ನ ಮಗಳು ಪದ್ಯವನ್ನೋದುತ್ತಿರುವದನ್ನೂ, ಓದುವದಾದ ಮೇಲೆ ಅವಳಲ್ಲಾದ ಬದಲನ್ನೂ ನೋಡಿ ಅರಸಿಯು ಅಂದಿನಿಂದಲೇ ವಾಚನಾಲಯದ ಎಲ್ಲ ಕಾವ್ಯಗಳನ್ನು ಮಾಲಗರಿಗೆ ಸಿಗದಂತೆ ಮಾಡಿದಳು.

ಅರಸನು ವರುಷಕ್ಕೆ ಎರಡಾವರ್ತಿ ಮಾತ್ರ ಅಲ್ಲಿಗೆ ಬರುತ್ತಿದ್ದ.

ಎರಡು ಮೂರು ದಿನ ಇರುತ್ತಿದ್ದ. ತನ್ನನ್ನು ರಾಜಧಾನಿಗೆ ಕರಕೊಂಡು ಹೋಗಬೇಕೆಂದು ಮಾಲಗರಿಯು ಮೇಲಿಂದ ಮೇಲೆ ಅರಸಿಗೆ ಬೇಡಿಕೊಳ್ಳುತ್ತಿದ್ದಳು. ಆದರೆ ಅರಸಿಯು ಆ ಮಾತಿನ ಸಲುವಾಗಿ ಆಗ್ರಹಪಡಿಸಬೇಡೆಂದು ಮಗಳನ್ನು ರಮಿಸುತ್ತಿದ್ದಳು.

ಈಗಾಗಲೇ ಮಾಲಗರಿಯು ಹದಿಮೂರು ವರ್ಷದವಳು. ಅವಳಿಗೆ ಎಲ್ಲವೂ ತಿಳಿಯುತ್ತಿತ್ತು. ಅರಮನೆಯಿಂದ ಹೊರಗೆ ಹಾಕಲ್ಪಟ್ಟ ದಾಸಿಯೊಬ್ಬಳು, ಮಾಲಗರಿಯು ಅರಮನೆಗೆ ಹೇಗೆ ಬಂದಳೆಂಬ ಗುಟ್ಟನ್ನು ಹೇಳಿದಳು. ಕಳ್ಳರು-ಭವಿಷ್ಯ ಹೇಳುವ ಜೋಗತಿಯರು ತನ್ನನ್ನು ಬಿಟ್ಟು ಹೋದರೆಂದು ಅವಳಿಗೆ ಗೊತ್ತಾಯಿತು. ಮಾಲಗರಿಯು ನಡುಗಿದಳು. ಮುತ್ತಿಗಿಂತ ಬೆಳ್ಳಗಾಯಿತು ಅವಳ ಮೊಗ. ತನ್ನ ತಾಯಿಯ ಹತ್ತರ ಹೋಗಿ ಎಲ್ಲವನ್ನೂ ಹೇಳಬೇಕೆಂದು ಹಟ ಹಿಡಿದಳು.

ಅರಸಿಯು ನಡಗುವ ದನಿಯಲ್ಲಿ ಅವಳ ಹುಟ್ಟಿನ ಗುಟ್ಟನ್ನೂ ಆದರ ವೈಚಿತ್ರ್ಯವನ್ನು ಹೇಳಿದಳು. ಕೇಳುತ್ತಿದ್ದಂತೆ ಮಾಲಗರಿಯ ಮೋರೆಯ ಮೇಲೆ ಹೊಸ ಕಾಂತಿ ಬೆಳಗಹತ್ತಿತು. ಮುಚ್ಚಂಜೆಯ ಬಾನಿನ ಬಣ್ಣ ಅವಳ ಮೊಗದ ಮೇಲೆ ಇಳಿದು ಬಂದಂತೆ ಕಂಡಿತು.

"ಅವ್ವಾ, ನಾನೇ ಆ ಮುತ್ತು–ಇದನ್ನು ಖಂಡಿತ ಬಲ್ಲೆ. ಈ ಸಂಗತಿಯನ್ನು ನೀನಾರಿಗೂ ಹೇಳಬೇಡ. ಗಾಳಿಗೆ ಕೂಡ ಹೇಳಬೇಡ; ಅದು ನನಗೆ ಕುಂದು ತಂದೀತು. ಸಮುದ್ರಕ್ಕೆ ಕೂಡ ಹೇಳದಿರು: ಅದು ನನ್ನನ್ನು ಎಳೆದುಕೊಂಡು ಹೋದೀತು. ಆದರೆ ಅವ್ವಾ, ಪರರು ಹಾಡಬಾರದೆಂದೇಕೆ ಅಪ್ಪಣೆ ಮಾಡಿರುವಿ? ಕಾವ್ಯವನ್ನೋದಲು ನನ್ನನ್ನೇಕೆ ಬಿಡುವದಿಲ್ಲ?" ಎಂದು ಮಾಲಗರಿಯು ತಾಯಿಯನ್ನು ಕೇಳಹತ್ತಿದಳು.

ಅರಸಿಯು ಏನೋ ನೆವ ಹೇಳುತ್ತ ಆ ಮಾತನ್ನು ತಪ್ಪಿಸಹತ್ತಿದಳು. ಮಾಲಗರಿಯಾದರೂ ಆ ಮಾತಿಗಾಗಿ ಹೆಚ್ಚಿಗೆ ಆಗ್ರಹ ಹಿಡಿಯಲಿಲ್ಲ.

ಸಾಯಂಕಾಲ, ಮಾಲಗರಿಯು ಕಡಲಿಗೆ ಹೋದಳು. ಕಡಲಿನ ಮಧ್ಯದಲ್ಲಿ ಎರಡು ಕರಿಯ ಬಂಡೆಗಳು. ಕಡಲು ಶಾಂತವಾಗಿ ಮಲಗಿ ನಿದ್ರಿಸುವಂತಿದೆ. ಮಗ್ಗಲು ಎತ್ತರವಾಗಿ ಬೆಳೆದ ಹಣ್ಣುಗಿಡಗಳು; ಮುಗಿಲು ಮುದ್ದಿಡುವ ಮರಗಳು; ಅವುಗಳ ಕೊರಳಿಗೆ ಸೃಷ್ಟಿದೇವಿಯು ಮಾಲೆಹಾಕಿದಂತಿದ್ದ ಹೂಬಳ್ಳಿಗಳು. ಗಾಳಿ ಸುಳಿದಾಡುವಾಗ ಅವು ಕಿವಿಮಾತು ಹೇಳುತ್ತಿದ್ದಂತೆ ಭಾಸವಾಗುತ್ತದೆ.

ಮಾಲಗರಿಗೆ ಸಾಗರವು ಅಷ್ಟು ಸುಂದರವಾಗಿ ಮನೋಹರವಾಗಿ ಎಂದೂ ಕಂಡಿರಲಿಲ್ಲ. ಕಡಲಿನ ಕಿರಿಯಲೆಗಳು ಕಾಲಿನ ತುದಿಗೆ ತಗಲುವಷ್ಟು ಅಂತರದ ಮೇಲೆ ಉಸುಬಿನಲ್ಲಿ ಕುಳಿತುಕೊಂಡಳು. ಸಾಗರವನ್ನು ನೋಡಹತ್ತಿದಳು. ಬಹು ಸೌಮ್ಯವಾಗಿತ್ತು- ಸುಂದರವಾಗಿತ್ತು. ಅದರ ಕೋಮಲತೆಯನ್ನು ನೋಡಿ ಮಾಲಗರಿಗೂ ಅದನ್ನು ಮಾತನಾಡಿಸಬೇಕೆಂದೆನಿಸಿತು. ಅಂದು—ತಾನು ರಾಜಧಾನಿಯಲ್ಲಿ ಕಿಡಿಕೆಯಲ್ಲಿ ಕುಳಿತು ಕೇಳಿದ ವೀಣಾ-ನಿನಾದವೂ, ವಾಚನಾಲಯದಲ್ಲಿ ಓದಿದಾಗ ಆದ ಕಾವ್ಯಾನಂದವೂ ನೆನಪಾಗಿ ಅವಳು ಮೈಮರೆತಳು. ಅವಳಿಗೆ ಆಗ ತಾನು ಮುತ್ತಾಗಿ ಕಡಲಿನ ಮಡಲಿನಲ್ಲಿ ಮಲಗಿದಾಗಿನ ನೆನಪಾಗಿರಬಹುದು. ಅದಕ್ಕಂತಲೇ ಅವಳು ಅಂದಿನ ವೀಣಾನಾದದ ಸುಖವನ್ನೂ, ಕಾವ್ಯದ ಸವಿಯನ್ನೂ ನೀಡೆಂದು ಕಡಲದೇವಿಯನ್ನು ಬೇಡಿಕೊಂಡಳು

ಸಾಗರವು ಮೃದುವಾಗಿ ಉತ್ತರ ಕೊಟ್ಟಂತಾಯಿತು. ಆ ಸೌಂದರ್ಯದ, ಅದಕ್ಕಿಂತಲೂ ಹೆಚ್ಚಾದ ವಿಶ್ವಸೌಂದರ್ಯದ ಮಾತು ಕೊಟ್ಟಂತೆ ಭಾಸವಾಯಿತು. ಆಗಸವು ಕಪ್ಪಾದಂತೆ ಆಳವಾದ ಕಡಲೂ ಕಪ್ಪಾಗುತ್ತ ಹೋಯಿತು. ಮಾಲಗರಿಯು ಸಂಪೂರ್ಣವಾಗಿ ಮೈಮರೆತಿದ್ದಳು.

ಎದುರಿಗೆ ಸಾವಿರಾರು ಚಿಕ್ಕ ಚಿಕ್ಕ ಬಿಳಿಯ ಕಿರಣಗಳು ದೂರದಿಂದ ಬರುತ್ತಿದ್ದಂತೆ ಕಂಡಿತು. ಪ್ರತಿ ಕಿರಣಕ್ಕೂ ಮುಗಿಲು ಬಣ್ಣದ ಸುಂದರವಾದ ಮುಖ. ತೆಳುವಾದ ತೆರೆಗಳಿಂದ ವಜ್ರ-ತುಷಾರಗಳನ್ನು ಚಲ್ಲುತ್ತ ಅವು ತನ್ನಡೆಗೇ ಬರುತ್ತಿದ್ದಂತೆ ಅವಳಿಗೆನಿಸಿತು.

ಆದರೆ ಅವು ಮಾಲಗರಿಯ ಕಡೆ ಬರಲಿಲ್ಲ. ಅವಳನ್ನು ನೋಡುತ್ತ ಹಾಯ್ದು ಹೋಗುತ್ತಿದ್ದಂತೆ ಕಂಡಿತು. ದಂಡೆಗೆ ಬೆಳೆದ ಹೂ-ಬಳ್ಳಿಗಳ ಬನದಲ್ಲಿ ಕೂಡಿ ಹೋಗುತ್ತಿದ್ದಂತೆ ತೋರಿತು. ಕಟ್ಟೆ ಕಡೆಗೆ ಒಂದೇ ಒಂದು-ದಂಡೆಯಿಂದ ಒಂದೆರಡು ಮೊಳ ಅಂತರದ ಮೇಲೆ ಶಾಂತವಾದ ನೀರಲ್ಲಿ ಕರಿಯ ಬಂಡೆಯು ಎದುರು ನಿಂತಂತೆ ಕಂಡಿತು.

ಮಾಲಗರಿಯು, "ನೀರಾರು? "ಎಂದಳು.

"ಜಲದೇವಿ"

"ಜಲದೇವಿಯೆ? ತಾಯಿ! ಹಾಗಾದರೆ ಭವಿಷ್ಯವನ್ನು ಹೇಳಬಲ್ಲೆಯಾ?"

"ಹೇಳಬಲ್ಲೆ"

"ನನ ಭವಿಷ್ಯ ಹೇಳುತ್ತಿಯಾ?"

ಉತ್ತರ ಕೊಡುವ ಮೊದಲು ಆ ಜಲದೇವಿಯು ಕ್ಷಣಹೊತ್ತು ಮಾಲಗರಿಯನ್ನು ನಿರುಕಿಸಿದಳು

"ನೀನು ಕವನ-ಗಾನಗಳಿಂದ ಹುಟ್ಟಿರುವೆ; ನಿನ್ನ ಅಂತರಾತ್ಮವಾದರೂ ಅದರಲ್ಲಿಯೇ ಕೂಡಿ ಹೋಗುವದು"

ಮಾಲಗರಿಯು "ತಾಯಿ, ಇಲ್ಲಿ ಬಾ ನನಗೊಂದು ಮುದ್ದು ಕೊಡು" ಎಂದಳು.

"ಆಗದು, ಜಲದೇವಿಯರು ದಂಡೆಗೆಂದೂ ಬರರು.'

'ಇನ್ನೆಂದಾದರೂ ನಾವಿಬ್ಬರೂ ಕೂಡಬಹುದೆ?"

"'ನಾನು ಸಾಗರದವಳು" ಜಲದೇವಿಯು ಮುಂದೆ ನುಡಿದಳು, "ಆದರೆ ನೀನು ಆಗಸದವಳು." ಅವಳು ಹೆಚ್ಚು ಮಾತಾಡದೆ ತಿರುಗಿದಳು. ಕರಿಯ ಬಂಡೆಗಲ್ಲ ಹಿಂದೆ ಮಾಯವಾದಳು.

ಅಂದಿನಿಂದ ಮಾಲಗರಿಯು ಎಂದೂ ನಗಲಿಲ್ಲ. ದಿನ ಕಳೆದಂತೆ ಅವಳು ಹೆಚ್ಚು ಗಂಭೀರಳಾಗಹತ್ತಿದಳು.

ಯಾರಾದರೂ ಆ ನಡುಗಡ್ಡೆಯಲ್ಲಿ ದುಃಖಿತರಾದರೆ, ತೊಂದರೆಯಲ್ಲಿದ್ದರೆ,-ಅವರ ಮನೆಗೆ ಹೋಗಿ ಸಹಾಯ ಮಾಡುತ್ತಿದ್ದಳು. ಕರುಣೆ ತೋರಿಸುತ್ತಿದ್ದಳು. ಅವರ ದುಃಖದಲ್ಲಿ ತಾನೂ ಭಾಗಿಯಾಗುತ್ತಿ

ದ್ದಳು. ಹೀಗೆ ಅವರ ಮನೆಗೆ ಹೋದಂತೆ ಅವರ ಅಂತಃಕರಣದಲ್ಲಿಯೂ ಹೊಕ್ಕು, ಶಾಂತಿಯನ್ನೂ ಬೆಳಕನ್ನೂ ಕೊಟ್ಟು ಸಮಾಧಾನ ಹೊಂದುತ್ತಿದ್ದಳು.

ಅವಳು ಹದಿನೈದು ವರ್ಷದವಳಾದಾಗ ಅವಳ ಸುಂದರವಾದ ಮುಖವನ್ನೂ, ಎತ್ತರವಾದ ಮೈಕಟ್ಟನ್ನೂ, ಮನೋಹರವಾದ ಮೈಬಣ್ಣವನ್ನೂ ನೋಡಿ ಅವಳ ತಾಯಿಯು ಇನ್ನು ಮಗಳಿಗೆ ವರನನ್ನು ಹುಡುಕಬೇಕೆಂದು ಆಲೋಚಿಸಹತ್ತಿದಳು.

* * * *

ಒಂದು ದಿನ ರಾಜಧಾನಿಯಿಂದ ಹಡಗ ಬಂತು. ರಾಜಧಾನಿಯು ಪ್ಲೇಗಿನಿಂದ ಹಾಳಾಗುತ್ತಿದೆಯೆಂಬ ಸುದ್ದಿಯನ್ನು ತಂದಿತು.

ಅರಸಿಗೆ ಈ ಸುದ್ದಿಯನ್ನು ಕೇಳಿ ಬಹು ದುಃಖವಾಯಿತು ಅವಳು ತನ್ನ ಗಂಡನ ವಿಷಯವಾಗಿ ಬಹು ಚಿಂತಾಕುಲಳಾದಳು ಆದರೂ ಮಾಲಗರಿಯನ್ನು ಅಲ್ಲಿಗೆ ಕರೆದೊಯ್ಯಲು ಮನಸ್ಸು ಒಪ್ಪಲಿಲ್ಲ. ತಾವಿಬ್ಬರೂ ರಾಜಧಾನಿಗೆ ಹೋಗಲೇಬೇಕೆಂದೂ ಅದು ತಮ್ಮ ಕರ್ತವ್ಯವೆಂದೂ ಮಗಳು ಮೇಲಿಂದ ಮೇಲೆ ಬಿನ್ನವಿಸಿಕೊಳ್ಳಲು ಅರಸಿಯು ನಿರುಪಾಯಳಾಗಿ ಹೊರಟಳು.

ವಿಧಿಯು ಬೇರೆಯಾಗಿತ್ತು. ಅವರು ಅರಮನೆ ಮುಟ್ಟುವದರೊಳಗಾಗಿ ಅರಸನು ಮರಣ ಹೊಂದಿದ್ದನು. ಮುಖ್ಯ ಮಂತ್ರಿಯು ಅರಸನ ಅಪ್ಪಣೆಯ ಮೇರೆಗೆ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಕ್ಕೊಂಡಿದ್ದನು.

ಅರಸಿಯ ಎದೆಯೊಡೆಯಿತು. ಬಹಳವಾಗಿ ಅತ್ತಳು. ಮಗಳಿಗೆ ತಾವಿನ್ನು ರಾಜಧಾನಿಯನ್ನು ಬಿಟ್ಟು ಹೋಗಬೇಕೆಂದು ಸೂಚಿಸಿದಳು. ಆದರೆ ಮಾಲಗರಿಯು ಎಂದೂ ಅಳಲಿಲ್ಲ; ದುಃಖಿಸಲಿಲ್ಲ. ತಂದೆಯು ತೀರಲು ತಾವೇ ಕಾರಣರೆಂದೂ, ತಾನಿನ್ನು ಹಾಸಿಗೆ ಹಿಡಿದು ಮಲಗಿದ ರೋಗಿಗಳ ಶುಶ್ರೂಷೆ ಮಾಡುವೆನೆಂದೂ, ನಡುಗಡ್ಡೆಗೆಂದೂ ಬರುವದಿಲ್ಲೆಂದೂ ಹಟ ಹಿಡಿದಳು.

ಅರಸಿಗೆ ಮಗಳ ಮನಸ್ಸೊಲಿಸುವದಾಗಲಿಲ್ಲಿ.

ಮಾಲಗರಿಯು ತನ್ನ ಕೆಲಸವನ್ನಾರಂಭಿಸಿದಳು. ಆಪ್ತೇಷ್ಟರು ಬೇನೆಯುವರನ್ನು ಬಿಟ್ಟು ಹೋಗಿಬಿಟ್ಟಿದ್ದರು. ಏಕಂದರೆ ತಮಗೂ ಅದು ಬಡಿದುಕೊಳ್ಳುವದೆಂಬ ಹೆದರಿಕೆ ಅವರಿಗೆ.

ಮಾಲಗರಿಯ ಕೆಲಸವು ಸಿರಿವಂತರನ್ನೂ, ಬಡವರನ್ನೂ ಕೂಡಿಯೇ ಮುಗ್ಧರನ್ನಾಗಿ ಮಾಡಿತು. ಎಲ್ಲರೂ ಅವಳೊಬ್ಬ ದೇವತೆ ಯೆಂದು ಭಾವಿಸಿದರು ಅವಳ ಸ್ವರ್ಗ ಸೌಂದರ್ಯ ನೋಡಿ, ಮಧುರ ದನಿ ಕೇಳಿ, ಕೋಮಲ ಕೈಗಳಿಂದ ಶುಶ್ರೂಷೆ ಹೊಂದಿ ಅವಳೊಬ್ಬ ದೇವಿಯೆಂದು ಹಾಡಿದರು.

ಶುಶ್ರೂಷೆ ಹೊಂದಿದವರಲ್ಲಿ-ಒಬ್ಬ ತರುಣ ಗಾಯಕ. ಮಾಲ ಗರಿಯು ಅವನನ್ನೂ ಗುಣಪಡಿಸಿದಳು. ಅವನು ಬಹು ದೂರಿನಿಂದ ರಾಜಧಾನಿಗೆ ತನ್ನ ವಿದ್ಯೆಯ ಸಲುವಾಗಿ ಬಂದಿದ್ದ. ಅವನು ಬಡವ ನಾದರೂ ಸುಂದರ, ತೇಜಸ್ವಿ. ಅವನ ಬೇನೆ ಗುಣವಾಗುವವರೆಗೂ ಮಾಲಗರಿಯು ಅವನಲ್ಲಿಗೆ ಬಂದು ಆರೈಕೆ ಮಾಡುತ್ತಿದ್ದಳು. ಗುಣ ವಾದಂತೆ ಅವನಲ್ಲಿ ಮಾಲಗರಿಯ ಮೇಲೆ ಪ್ರೇಮವು ಹುಟ್ಟಿತು. ಅವನು ಅದನ್ನು ಆಡಿತೋರಿಸಲಿಲ್ಲ. ಮಾಲಗರಿಗೂ ಅವನಲ್ಲಿ ಪ್ರೇಮ ಹುಟ್ಟಿರಬಹುದು; ಆದರೆ ಅದು ಆಡಿತೋರಿಸತಕ್ಕ ಸಮಯವಾಗಿರಲಿಲ್ಲ.

ಪ್ಲೇಗು ನಿಂತಮೇಲೆ ಅವಳಿಗೆ ಆ ತರುಣ ಗಾಯಕನ ನೆನಪಾಗು ತ್ತಿತ್ತು; ಹಗಲೆಲ್ಲ ನೆನಪಾಗುತ್ತಿತ್ತು. ಆದರೆ ಅವಳಿಗೆ ಏನು ಕಾರ ಣವೋ ಪುನಃ ಅವನ ಭೆಟ್ಟಿಯೇ ಆಗಲಿಲ್ಲ.

* * * *

ರಾಜ್ಯದ ಮುಖ್ಯಮಂತ್ರಿಯು ಅರಸಿಯ ಮುಂದೆ ಮಾಲಗರಿ ಯನ್ನು ಮದುವೆಯಾಗುವ ತನ್ನ ಅಪೇಕ್ಷೆಯನ್ನು ತೋರಿಸಿದನು.

ಅರಸಿಯು ತನ್ನ ಮಗಳ ಸ್ವಭಾವವನ್ನು ಅರಿತಿದ್ದಳು; ಮಾಲ ಗರಿಯು ಅವನ ಅಪೇಕ್ಷೆಯನ್ನು ನಿರಾಕರಿಸಬಹುದೆಂದು ಬಗೆದಳು. ಅದು ನಿಜವಿತ್ತು. ಆದರೆ ಅರಸಿಗೆ ಮಾತ್ರ ಮಂತ್ರಿಯ ಅಪೇಕ್ಷೆ ಯನ್ನು ನಿರಾಕರಿಸುವದು ಒಪ್ಪಿತವಾಗಲಿಲ್ಲ.

ತನ್ನ ಮನಸ್ಸಿಲ್ಲದಿದ್ದರೂ ಮಾಲಗರಿಯು ಚೇಷ್ಟೆಗಾಗಿ, ಮಂತ್ರಿಯು ಎಲ್ಲ ಬಡಹುಡಿಗೆಯರ ಮದುವೆಗೆ ಹಣ ಕೊಟ್ಟರೆ, ನಗರದ ಎಲ್ಲ ಬಡವರಿಗೆ ವರ್ಷಾಶನ ಗೊತ್ತುಪಡಿಸಿದರೆ, ತಾನು ಅವ ನನ್ನು ಮದುವೆಯಾಗುವೆನೆಂದು ಹೇಳಿದಳು.

ಮಂತ್ರಿ ಅದರಂತೆ ಮಾಡಿಯೇ ಬಿಟ್ಟ!

ಮಾಲಗರಿಯು ದುಃಖಿತಳಾದಳು. ತಾನು ವಚನಭ್ರಷ್ಟಳಾದರೆ, ಅಷ್ಟು ಬಡವರ ಹಾನಿಯಾಗುತ್ತದೆ. ಲಗ್ನಮಾಡಿಕೊಳ್ಳುವ ವಿಚಾ ರವೂ ಅಸಹ್ಯವಾಯಿತು. ತಾನೊಬ್ಬಳು ಬಲಿಯಾದರೂ ಉಳಿದ ಸಾವಿರಾರು ಜನರು ಸುಖಬಡುವರಲ್ಲ ಎಂದು ಸಮಾಧಾನ ಹಚ್ಚಿ ಕೊಂಡು, ಆತ್ಮಾರ್ಪಣ ಮಾಡಲು ಸಿದ್ಧಳಾದಳು.

ತನ್ನ ಮದುವೆಯ ದಿನವನ್ನು ಮುಂದೂಡಬೇಕೆಂದು, ಸಮಾ ರಂಭವನ್ನು ಮೊದಲಿದ್ದ ನಡುಗಡ್ಡೆಯಲ್ಲಿ ಮಾಡಲು ಮಂತ್ರಿಯ ಅಪ್ಪಣೆ ಕೇಳಿದಳು ಅವನೊಪ್ಪಿದ. ಹೀಗಾಗಿ ವಧೂವರರು ರಾಜ್ಯದ ಎರಡು ಹಡಗಗಳಲ್ಲಿ ಬಳಗದವರೊಡನೆ ಹೊರಟರು.

* * * *

ಅಗಸ್ಟ ತಿಂಗಳು. ಪ್ರವಾಸದ ಎರಡನೆಯ ದಿನ. ಬೆಳಗು ಮುಂಜಾನೆಯ ಒಂದು ಗಂಟೆ. ಹುಣ್ಣಿವೆಯ ಚಂದ್ರನು ಆಕಾಶ ವನ್ನು ಬೆಳಗುತ್ತಿದ್ದನು. ಮಾಲಗರಿಯು ಎದ್ದು ಬೇದಿಂಗಳವಿಹಾರ ಕ್ಕಾಗಿ ಹಡಗದ ಮೇಲ್ಬದಿಗೆ ಹೋದಳು. ಅಲ್ಲಿ ಕುಳಿತು ಸಮುದ್ರ ವನ್ನು ನೆಟ್ಟದೃಷ್ಟಿಯಿಂದ ನೋಡುತ್ತಿದ್ದಳು. ಕೆಲಹೊತ್ತಿನ ಮೇಲೆ ಹಡಗ ನಡಿಸುವವನೊಬ್ಬನು ತನ್ನೊಡನೆ ಮಾತಾಡಲು ಅಪೇಕ್ಷಿಸುತ್ತಿ ದ್ದಾನೆಂದೂ, ಧೈರ್ಯಗುಂದಿ ಹಿಂದೆಗೆಯುತ್ತಿದ್ದಾನೆಂದೂ ಆವಳಿಗೆ ಕಂಡುಬಂತು.

ಅವಳು ಆವನಿಗೆ ಸೌಮ್ಯವಾಗಿ, "ಏನು ಬೇಕು ?" ಎಂದು ಕೇಳಿದಳು.

ಅವ ಕ್ಷಣಕಾಲ ತಡೆದು, " ನಾನು ತಮ್ಮಿಂದ ಪ್ಲೇಗಿನಲ್ಲಿ

ಸುಶ್ರೂಷೆ ಹೊಂದಿದ ಗಾಯಕನಲ್ಲವೇ?" ಎಂದು ವಿನಯದಿಂದ ನುಡಿದ.

ಮಾಲಗರಿಯು ಚೇತರಿಸಿಕೊಂಡಳು. ಮೈಯಲ್ಲಿ ಮಿಂಚು ಸಂಚರಿಸಿದಂತಾಯಿತು. ಅವನನ್ನು ಚನ್ನಾಗಿ ನೋಡಿದಳು. ಹೌದು. ತಾನು ಆರೈಕೆ ಮಾಡಿದ ತರುಣ ಗಾಯಕ ತನ್ನ ಜೀವನದಲ್ಲಿ ಅವಳು ನಾಚಿದುದು ಇದೇ ಮೊದಲು. ಆದರೆ ಅವನು ಆ ವೇಷದಲ್ಲಿ ಹಡಗದಲ್ಲೇಕೆ ಇದ್ದಾನೆಂದು ಅವಳು ಕೇಳಲಿಲ್ಲ. ತನ್ನನ್ನವಳು ಒಮ್ಮೆಲೆ ಬಿಟ್ಟು ಹೋದದ್ದಕ್ಕಾಗಿ ತನಗೆ ಬಹು ದುಃಖವಾಯಿತೆಂದೂ. ಅವಳು ಮಾಡಿದ ಆರೈಕೆಗಾಗಿ ಕೃತಜ್ಞತೆ ತೋರಿಸಲು ಬಂದಿರುವೆನೆಂದೂ ಅವನು ಹೇಳಿದನು.

ಅವಳೇನೂ ಅವನ ಮಾತಿಗೆ ಉತ್ತರ ಕೊಡಲಿಲ್ಲ. ಆ ವಿಷಯವನ್ನು ಅಷ್ಟಕ್ಕೇ ಬಿಟ್ಟಳು.

ಅವನು ತನ್ನ ದೇಶದ ವೃತ್ತಾಂತವನ್ನೆಲ್ಲ ಹೇಳಿದನು.

"ಅದೊಂದು ಬಹು ದೂರದ ದೇಶ. ಬೇಸಿಗೆಯ ಬಿರುಗಾಳಿಗಳಿಂದಲೂ, ಚಳಿಗಾಲದ ಬರ್ಫದಿಂದಲೂ ಆಚ್ಛಾದಿತವಾದುದು. ಕಲ್ಲು ಬಂಡೆಗಳಿಂದ-ಸರೋವರಗಳಿಂದ ತುಂಬಿದೆ. ಅಲ್ಲಲ್ಲಿ ನಿಬಿಡವಾದ ಅರಣ್ಯಗಳು. ಆದರೆ ಫಲದ್ರೂಪವಾದ ಭೂಮಿಯಿಲ್ಲ. ಅಲ್ಲಿಯ ಜನ ಬರಗಾಲದಲ್ಲಿ ಗಿಡಗಳಿಂದ ಹಿಟ್ಟು ತಗೆದು ರೊಟ್ಟೀ ಮಾಡುತ್ತಾರೆ ಅಲ್ಲಿಯವರು ಬಹಳ ನಿಗರ್ವಿಗಳು. ಜಾಲಗಾರರು. ಸರೋವರಗಳಲ್ಲಿ ಮೀನು ಹಿಡಿಯುತ್ತಾರೆ. ಬೇಟೆಗಾಗಿ ಹೋಗುತ್ತಾರೆ. ಆದರೆ ಅಲ್ಲಿ ಬೆಳ್ಳಿ-ಬಂಗಾರಗಳಿಲ್ಲ. ಮುತ್ತು-ರತ್ನಗಳಿಲ್ಲ. ಬಡದೇಶ.—" ಗಾಯಕನು ಮತ್ತೆ ಹೇಳ ಹತ್ತಿದನು. "ಆದರೆ ಆ ನಮ್ಮ ದೇಶವು ಜಗತ್ತಿನಲ್ಲಿಯ ಅಮೌಲ್ಯ ವಸ್ತುಗಳ ತವರುಮನೆ-ಕಾವ್ಯ-ಗಾನಗಳ ಆಗರ" ಎಂದು ಮುಗಿಸಿದನು.

"ಅದು ಹೇಗೆ ಹೇಳುವೆ?" ಎಂದು ಮಾಲಗರಿಯು ಕುತೂಹಲದಿಂದ ಕೇಳಿದಳು.

ಆ ತರುಣನು ತನ್ನ ದೇಶದ ಒಂದು ಮಹಾ ಕಾವ್ಯವನ್ನು ಬಣ್ಣಿಸಿದ. ಆ ಕಾವ್ಯವನ್ನು ತನ್ನ ಜನರು ಸಮುದ್ರ ದಂಡೆಯಲ್ಲಿ ಇಲ್ಲವೆ ಹೂಗಿಡಗಳಿಂದಲಂಕೃತವಾದ ಸರೋವರ ತೀರದಲ್ಲಿ ಕುಳಿತು ಇಂದಿಗೂ ಹಾಡುತ್ತಾರೆ. ಆ ಕಾವ್ಯದೊಳಗಿನ ಅತಿ ಸುಂದರ ಹಾಡುಗಳನ್ನು ಅಂದು ತೋರಿಸಿದನು. ಪ್ರೇಮ-ವಿರಹಗಳ ಕತೆಗಳನ್ನೂ, ಯುದ್ಧ-ಶಾಂತಿಗಳ ವರ್ಣನೆಯನ್ನು ಹೇಳಿದನು ಕಡೆಗೆ ತಮ್ಮ ದೇಶದ ಪ್ರಸಿದ್ಧ ಕವಿಯಾದ ರಾಜನ ಕತೆ ಹೇಳಿ, ಅವನು ಸಮುದ್ರದ ದಂಡೆಗೆ ಅಡ್ಡಾಡುವಾಗ ಕಾವ್ಯ ರಚಿಸಿದ್ದನ್ನೂ, ಅದನ್ನು ಹಾಡುತ್ತಿದ್ದಂತೆ ಅವನ ಹೃದಯ ಕರಗಿ ಬಾಷ್ಪಗಳುದುರಿ ಮುತ್ತುಗಳಾದದ್ದನ್ನೂ ಹೇಳಿದ.

ತರುಣನ ಮೋರೆಯ ಮೇಲೆ ಚಂದಿರನ ಕಿರಣಗಳು ಪ್ರಕಾಶಿಸುತ್ತಿದ್ದವು. ಅವಳು ಅವನ ಕತೆಯನ್ನು ವಿಶಾಲದೃಷ್ಟಿಯಿಂದಲೂ ಉತ್ಸುಕತೆಯಿಂದಲೂ ಕೇಳುತ್ತಿದ್ದಳು; ಪ್ರೇಮಪೂರ್ಣಳಾಗಿ, ಉದ್ವೇಗದಿಂದ ತನ್ನ ಎರಡೂ ಕೈಗಳನ್ನು ಎದೆಗವಚಿಕೊಂಡಳು.

ಅವನ ಕತೆ ಮುಗಿಯುತ್ತಿದ್ದಂತೆಯೇ ಅವಳು, "ನಿನ್ನನ್ನೇಕೆ ನಾನು ಮೊದಲು ನೋಡಿರಲಿಕ್ಕಿಲ್ಲ!" ಎಂದು ದುಃಖದ ಆವೇಶದಿಂದ ಮೆಲ್ಲಗೆ ಉಸುರಿದಳು. ಹಾಗಂದ ಕೂಡಲೆ ಅವಳ ಮೊಗದಲ್ಲಿ ವಿಚಿತ್ರ ಬದಲು ಕಂಡಿತು. ಹಾಗಂದದ್ದಕ್ಕಾಗಿ ಅವಳಿಗೆ ಅಸಮಾಧಾನವಾಗಿರಬೇಕು. ಆ ಮೇಲೆ ಸಾಗರದೆಡೆಗೆ ನೋಡಹತ್ತಿದಳು. ಒಮ್ಮೆಲೆ–ಅಲ್ಲಿ, ಆ ವಿಶಾಲವಾದ ಕಡಲಲ್ಲಿ ಬೆಳ್ಳಿಯ ಬೆಳ್ಳಗಿನ ತೆರೆಗಳು-ಜಲದೇವಿಯರು ಕಂಡರು.

ಅವರಲ್ಲಿ ತನಗೆ ಬೆಟ್ಟಿಯಾದ ಜಲದೇವಿಯನ್ನು ನೋಡಿದಳು. ಇಬ್ಬರ ದೃಷ್ಟಿಗಳೂ ಒಂದಾದವು. ಜಲದೇವಿಯ ದೃಷ್ಟಿಯು ಮಾಲಗರಿಯ ಹೃದಯಕ್ಕೆ ಏನೋ ಹೇಳಿತು.

"ಆ ರಾಜಕವಿಯ ಕಾವ್ಯ–ಗಾನ ಮಾಡುವಿಯಾ ?'' ಎಂದಳು ಮಾಲಗರಿ.

ಅವನು ಹೋಗಿ ವೀಣೆ ತಂದ.

ಅವಳು ಯಾರಿಗೂ ಕಾಣದಂತೆ ಮರೆಯಲ್ಲಿ ನಿಂತು ಹಾಡು ಕೇಳ ತೊಡಗಿದಳು.

ಕಲಾವಿದನೂ, ಪ್ರೇಮಿಯೂ ಆದ ಆ ತರುಣನು ಕವನ ಹೇಳ ತೊಡಗಿದನು. ದೇವಲೋಕದ ಆ ವೀಣೆಯನ್ನು ನುಡಿಸುತ್ತಿದ್ದನು. ಅವನ ಹೃದಯವು ವೀಣಾ-ನಿನಾದದಲ್ಲಿ ಬೆರತಂತೆ ತೋರಿತು.

ವೀಣಾನಿನಾದಕ್ಕೆ ಮೈಮರೆತು ಜಲಚರಗಳು ಹಡಗದ ಬೆನ್ನು ಹತ್ತಿದವು. ಅಂಬಿಗರು, ಹಡಗದ ಅಧಿಕಾರಿಗಳು, ಸೇವಕರು, ಸ್ವಾಮಿಗಳು—ಎಲ್ಲರೂ ಆ ಸ್ವರ್ಗೀಯ ಗಾಯನ ಕೇಳಲು ಮುಕ್ಕರಿದರು.

ತರುಣನು ಬಹು ವೇಳೆಯವರೆಗೆ ಅವರಾರನ್ನೂ ನೋಡಲಿಲ್ಲ, ಹಿಂದುಗಡೆ ಸುತ್ತಲೂ ನೋಡಿ, ಜನರಿದ್ದಾರೆಂದು ತಿಳಿದ ಕೂಡಲೆ ಸಂಗೀತ ನಿಲ್ಲಿಸಿದ. ಮಾಲಗರಿಯ ಅಪ್ಪಣೆ ಪಡಕೊಳ್ಳಬೇಕೆಂದ.

ಆದರೆ ಅಲ್ಲೇನಿದೆ? ಚಾಪ್ಪುಗಳಿಂದ ಒಪ್ಪಿಯಾದ ಒಂದು ಕೈವಸ್ತ್ರ!